

# ಅಚಲ


ಸಂಪುಟ 12 | ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ | ನವೆಂಬರ್ 1997

ಸಂಚಿಕೆ 5 | ದ್ವೈಮಾಸಿಕ | ಬೆಂಗಳೂರು



ಚಂದಾ ಮತ್ತು ಲೇಖನಗಳನ್ನು
ಕಳುಹಿಸುವ ವಿಳಾಸ
ಸಂಪಾದಕರು
ಅಚಲ
ಬಿ-30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್
1ನೇ ಮುಖ್ಯರಸ್ತೆ, 9ನೇ ಕ್ರಾಸ್
ವಿಜಯನಗರ ಎರಡನೇ ಹಂತ,
ಬೆಂಗಳೂರು - 40






ಬೆಲೆ
ಬಿಡಿ ಪ್ರತಿ - 5 ರೂ.
ವಾರ್ಷಿಕ ಚಂದಾ - 30 ರೂ.
ಅಜೀವ ಚಂದಾ - 250 ರೂ.
(ಸಂಸ್ಥೆಗಳಿಗೆ) - 300 ರೂ.


## ಒಳಪುಟಗಳಲ್ಲಿ


★ ಸ್ವಾತಂತ್ರ್ಯ ಯೋಧನ ಹೆಂಡತಿ (ಕವನ)
- ಶಾಂತಾ ನಾಗರಾಜ್

★ ಕುಂದದ ಚೇತನ - ಉಮಾಬಾಯಿ ಕುಂದಾಪುರ
- ಡಾ॥ ಜ್ಯೋತ್ಸ್ನಾ ಕಾಮತ್

★ ಸ್ವಾತಂತ್ರ್ಯ ಸಂಗ್ರಾಮದ ಓರ್ವ ಸ್ವಾಭಿಮಾನಿ ಮಹಿಳೆ - ಅತ್ತರ್ ಕೌರ್
- ನೇಮಿಚಂದ್ರ

★ ಸ್ವಾತಂತ್ರ್ಯ ಹೋರಾಟದ ನೆನಪುಗಳು : (ಸಂದರ್ಶನ)
- ಎನ್. ಗಾಯತ್ರಿ

★ ಮಹಿಳೆ ಮತ್ತು ಆರೋಗ್ಯ
- ಡಾ॥ ಸಿ. ಪ್ರಕಾಶರಾವ್

★ ವರದಿ, ಪುಸ್ತಕ ಪರಿಚಯ, ಪ್ರೀತಿಯ ಅಚಲ ಇತ್ಯಾದಿ...

ಸಂಪಾದಕ ಮಂಡಲಿ
ಎನ್. ಗಾಯತ್ರಿ
ನೇಮಿಚಂದ್ರ, ದೇವಿ
ಡಾ॥ ಬಿ.ಎನ್. ಸುಮಿತ್ರಾಬಾಯಿ
ಶಾಂತಾ ನಾಗರಾಜ್
ಎಚ್.ಎನ್. ಗೀತಾ

ಪ್ರಕಾಶಕರು
ಜಾಗೃತಿ ಮಹಿಳಾ
ಅಧ್ಯಯನ ಕೇಂದ್ರ
ಬೆಂಗಳೂರು

ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10/= ಬ್ಯಾಂಕ್ ಕಮಿಷನ್ ಸೇರಿಸಿ ಕಳುಹಿಸಬೇಕು

ಎಂ.ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸ ಬೇಕು

ಬದಲಾದ ವಿಳಾಸಗಳನ್ನು ದಯವಿಟ್ಟು ಬರೆದು ತಿಳಿಸಿ.

ವಿಮರ್ಶೆಗಾಗಿ ಪುಸ್ತಕಗಳನ್ನು ಕಳುಹಿಸುವವರು ದಯವಿಟ್ಟು ಎರಡು ಪ್ರತಿಗಳನ್ನು ಕಳುಹಿಸಬೇಕು

ಆತ್ಮೀಯರೇ,

ಭಾರತದ ಮಹಿಳಾ ಚಳುವಳಿಯ ಬೀಜಾಂಕುರಗಳನ್ನು ಗುರುತಿಸಲು ಸಾಧ್ಯವಾಗುವುದೇ ಸ್ವಾತಂತ್ರ್ಯ ಚಳುವಳಿಯಲ್ಲಿ. ಅಂದಿನಿಂದ ಇಂದಿನವರೆಗೆ ಶೋಷಣೆಗೆ ಒಳಗಾಗಿರುವ ಮಹಿಳೆ ಪುರುಷಾಧಿಪತ್ಯದ ಎಲ್ಲ ನೆಲೆಗಳನ್ನು ಪುರುಷನೊಂದಿಗೆ ಸೇರಿ ಹೋರಾಡುತ್ತಾ ಬಂದಿದ್ದಾಳೆ. ಪುರುಷಕೇಂದ್ರಿತವಾದ ರಾಜಕೀಯ ವಲಯದೊಳಕ್ಕೂ ನುಗ್ಗಿ 'ಅಧಿಕಾರ' ಮೀಮಾಂಸೆಗೆ ಹೊಸ ಸೂತ್ರ ಬರೆಯಲು ಹವಣಿಸುತ್ತಿದ್ದಾಳೆ. ಹಾಗೆಯೇ ಕೆಲವು ಸಂದರ್ಭದಲ್ಲಿ 'ಅಧಿಕಾರ'ದ ಸುಳಿಯಲ್ಲಿ ಸಿಕ್ಕಿ ತಾನೂ ಪುರುಷಾಧಿಕಾರನ ಅಧಿಪತ್ಯದ ಪಾತ್ರವನ್ನು ನಿರ್ವಹಿಸುತ್ತಿದ್ದಾಳೆ.

ಇಂದು ಸ್ವಾತಂತ್ರ್ಯ ಬಂದು ಐವತ್ತರ ದಶಕದ ಹೊಸ್ತಿಲಲ್ಲಿ ನಿಂತು ಮಹಿಳೆಯ ಈ ಹೆಜ್ಜೆಗಳನ್ನು ಗುರುತಿಸುವಾಗ ಮಹಿಳಾ ಚಳುವಳಿಗೆ ನಾಂದಿ ಹಾಡಿದ ಸ್ವಾತಂತ್ರ್ಯ ಹೋರಾಟದ ಸಂದರ್ಭವನ್ನು ಭಾವನಾತ್ಮಕ ನೆಲೆಯಲ್ಲಿ ಮಾತ್ರ ನೋಡದೆ ವಸ್ತುನಿಷ್ಠವಾಗಿ ಅವಲೋಕಿಸಬೇಕಾದ್ದು ಅಗತ್ಯವಾಗಿದೆ. ಚರಿತ್ರೆಯ ಪಾಠಗಳು ಇಂದಿನ ಮಹಿಳಾ ಹೋರಾಟದ ನೆಲೆಗಳನ್ನು ನಿರ್ವಚಿಸಿಕೊಳ್ಳಲು ಅಗತ್ಯವಾಗಿದೆ. ಈ ದಿಕ್ಕಿನತ್ತ ಗಮನ ಹರಿಸದೆ ಸ್ವಾತಂತ್ರ್ಯ ಚಳುವಳಿ ಕೊಟ್ಟ ಅನುಭವಗಳನ್ನು ಧಿಕ್ಕರಿಸುವುದು, ಸ್ವಾತಂತ್ರ್ಯೋತ್ಸವವನ್ನು ಕರಾಳ ದಿನವನ್ನಾಗಿ ಆಚರಿಸುವುದು ಚರಿತ್ರೆಗೆ ನಾವು ಕೊಡುವ ಗೌರವವಲ್ಲ.

ಈ ದಿಕ್ಕಿನಲ್ಲಿ ಅಚಲ ಪತ್ರಿಕೆಯು ಸ್ವಾತಂತ್ರ್ಯ ಚಳುವಳಿಯಲ್ಲಿ ನಾಯಕಿಯರಾಗಿ ಮಾತ್ರವಷ್ಟೇ ಅಲ್ಲ, ಕಾರ್ಯಕರ್ತೆಯರಾಗಿಯೂ ಭಾಗವಹಿಸಿದ ಲಭ್ಯವಿರುವ ಮಹಿಳೆಯರ ಅನುಭವಗಳನ್ನು ದಾಖಲಿಸುವ ಇಚ್ಛೆ ಹೊಂದಿದೆ. ನಿಮ್ಮ ನಡುವಿರುವ ಇಂತಹ ಮಹಿಳೆಯರ ಬದುಕು ಅನುಭವಗಳ ಚಿತ್ರವನ್ನು ಅಚಲಕ್ಕೆ ಬರೆದುಕೊಡಿ. ಇಂತಹ ದಾಖಲೆಗಳು ಸ್ವಾತಂತ್ರ್ಯ ಚಳುವಳಿಯಲ್ಲಿನ ಹೆಣ್ಣಿನ ಪಾತ್ರವನ್ನು ಸ್ಪಷ್ಟಪಡಿಸಲು ನೆರವಾಗುವುದು.

– ಸಂ.

# ಐವತ್ತಕ್ಕೆ ನಮ್ಮ ಬಿಡುಗಡೆಯೆ ?

ವೈದ್ಯಕೀಯ ಶೋಧನೆಗಳು ಅದರಲ್ಲೂ ಸಂತಾನ ನಿಯಂತ್ರಣಕ್ಕೆ ಸಂಬಂಧಿಸಿದಂಥವು ಮುಖ್ಯವಾಗಿ ಮಹಿಳೆಯರನ್ನೇ ಏಕೆ ತಮ್ಮ ಪ್ರಯೋಗಕ್ಕೆ ಲಕ್ಷ್ಯವಾಗಿ ಇಟ್ಟುಕೊಂಡಿರಬೇಕು? ದೆಹಲಿ, ಕಲ್ಕತ್ತಾ ಹಾಗೂ ಬೆಂಗಳೂರು ನಗರಗಳಲ್ಲಿ ಇತ್ತೀಚೆಗೆ ಬೃಹತ್ ಪ್ರಮಾಣದಲ್ಲಿ ಮಹಿಳಾ ಸಂಘಟನೆಗಳು ಕ್ವಿನ್‌ಕ್ರಿನ್ ಎಂಬ ಸಂತಾನ ನಿರೋಧ ಔಷಧಿಯ ದುರ್ಬಳಕೆ ವಿರುದ್ಧವಾಗಿ ನಡೆಸಿರುವ ಹೋರಾಟ, ಪ್ರತಿಭಟನೆಗಳು ಈ ಪ್ರಶ್ನೆಯನ್ನು, ಇದಕ್ಕೆ ಹೊಂದಿಕೊಂಡ ಹಲವಾರು ಸಮಸ್ಯೆಗಳನ್ನು ಮುಂದಿಟ್ಟಿವೆ.

ನಮ್ಮ ಭಾರತದ ಸಂದರ್ಭದಲ್ಲಿ ಪ್ರಚಲಿತವಿರುವ ಒಂದು ಪ್ರಮುಖ ಧೋರಣೆ ಜನಸಂಖ್ಯೆಯನ್ನು "ಒಂದು ಸಮಸ್ಯೆ" ಯೆಂದೇ ನೋಡುವ ರೀತಿಯದು. ಏಷ್ಯಾಖಂಡದಲ್ಲಿ ಚೀನಾ ಕೂಡ ಇದೇ ರೀತಿ ಜನಸಂಖ್ಯಾ ಆಸ್ಫೋಟವನ್ನು ಎದುರಿಸುತ್ತಿದ್ದರೂ ಅಲ್ಲಿ ಜನಸಂಖ್ಯೆಯನ್ನು ಜನಸಂಪತ್ತು ಎಂದು ನೋಡಲಾಗುತ್ತದೆ. ಆದರೆ ಭಾರತಕ್ಕೆ ಪ್ರಪಂಚದ ತುಂಬ ಮುಂದುವರೆದಿರುವ ಆದರೆ ಕಡಿಮೆ ಜನಸಂಖ್ಯೆಯುಳ್ಳ ರಾಷ್ಟ್ರಗಳನ್ನು ಮಾದರಿಯಾಗಿಟ್ಟುಕೊಂಡು, ಪ್ರಗತಿಯ ಬಗ್ಗೆ ಆ ದೇಶಗಳು ಹೊಂದಿರುವ ವಿಚಾರಧಾರೆಯನ್ನೇ ಅನುಕರಿಸುವುದು ಮೊದಲಿನಿಂದಲೂ ಬಂದಿರುವ ಜಾಡ್ಯವಾಗಿದೆ. ಕಳೆದ ಐವತ್ತು ವರ್ಷಗಳಿಂದಲೂ ವಿದೇಶಗಳ ತಜ್ಞರು ಕಂಡು ಹಿಡಿದು, ರೂಢಿಗೊಳಿಸಿರುವಂಥ ಸಂತಾನ ನಿರೋಧ ವಿಧಾನಗಳನ್ನು ಭಾರತದಲ್ಲಿ ಆ ಬಗೆಯ ತಜ್ಞತೆಯ ಕೊರತೆಯಿದ್ದರೂ ಅನುಸರಿಸಲಾಗುತ್ತಿದೆ. ಆದರೂ ಜನಸಂಖ್ಯೆಯ ನಿಜವಾದ, ಗಮನಾರ್ಹ ಪ್ರಮಾಣದ ನಿಯಂತ್ರಣ ಸಾಧ್ಯವಾಗಿಲ್ಲ. ಇದೇಕೆ ಹೀಗಾಗುತ್ತಿದೆ?

ಕೇವಲ ಜನಸಂಖ್ಯೆಯ ಪ್ರಶ್ನೆಯೊಂದೇ ಅಲ್ಲ. ದೊಡ್ಡ ಜನ ಸಮುದಾಯವಾಗಿರುವ ನಾವು ದೇಶದ ಪರಿಮಿತ ಸಂಪತ್ತನ್ನು ಹಂಚಿಕೊಳ್ಳುವ ಪರಿಸ್ಥಿತಿ ಇರುವುದರಿಂದ ಎಲ್ಲಾ ರಂಗಗಳಲ್ಲಿ ಇದ್ದ ಅಸಮತೋಲನ 50 ವರ್ಷಗಳ ನಂತರವೂ ಉಳಿದಿದೆ. ನಿರಕ್ಷರತೆ, ನಿರುದ್ಯೋಗ, ಬಡತನಗಳೂ ಹಾಗೇ ಉಳಿದಿರುವಂತೆ ಮಾಡುತ್ತಿರುವ ಶಕ್ತಿಗಳು ಯಾವುವು? ಅಂಥ ದುಷ್ಟ ಶಕ್ತಿಗಳು ಪ್ರಜಾಪ್ರಭುತ್ವದ ಹೆಸರಿನಲ್ಲಿ ಈ ವ್ಯವಸ್ಥೆಯೊಳಗೆ ಪ್ರಬಲವಾಗಿ ಕ್ರಿಯಾಶೀಲವಾಗಿವೆ ಎಂಬುದರ ಬಗ್ಗೆ ಸಮಚಿತ್ತದ, ಸಾವಧಾನದ ಸಮಗ್ರ ಚಿಂತನೆ ಈಗಲಾದರೂ ನಡೆಯಬೇಕಾದದ್ದು ತುಂಬ ಅವಶ್ಯಕ. ರಾಜಕೀಯ ಕ್ಷೇತ್ರದಲ್ಲಿ ತುಂಬ ಬೆಳೆದು ನಿಂತಿರುವ ಭ್ರಷ್ಟತನ, ಸಮಯ ಸಾಧಕತೆ, ಸ್ವಜನ ಪಕ್ಷಪಾತ, ಈ ಎಲ್ಲಕ್ಕಿಂತ ಮಿಗಿಲಾದ ಧನದಾಹ, ಅಧಿಕಾರ ದಾಹಗಳ ಹಪಾಹಪಿ, ನಮ್ಮ ದೇಶದ ಬೇರಿನವರೆಗೂ ಜಾತಿ-ರಾಜಕೀಯವನ್ನು ಬೆಳೆಸುವಲ್ಲಿ ಯಶಸ್ವಿಯಾಗಿದೆ. ಇದರಿಂದಾಗಿ ಎಷ್ಟೇ ಬಗೆಯ ಮೀಸಲಾತಿಗಳು ಸೃಷ್ಟಿಯಾದರೂ ದೇಶದ ಸಾಂಸ್ಕೃತಿಕ ಏಳಿಗೆ ದೂರದ ಕನಸಾಗಿಯೇ ಉಳಿಯುವಂತಾಗಿದೆ. ಇಂಥ ಸಮಸ್ಯೆಗಳೆಲ್ಲದರ ಸಂಕೀರ್ಣ ಸ್ವರೂಪವನ್ನು ಗಮನಿಸದೆ ಕೇವಲ ಜನಸಂಖ್ಯೆಯೊಂದೇ ನಮ್ಮ ದೇಶದ ಮುಖ್ಯ ಸಮಸ್ಯೆ ಎಂದು ಭಾವಿಸುವುದು ಅಸಂಗತವಾಗುತ್ತದೆ.

ಜಗತ್ತಿನ ಯಾವೊಂದು ಕ್ಷೇತ್ರವೂ ಇಂದು ರಾಜಕೀಯದಿಂದ ಮುಕ್ತವಾಗಿಲ್ಲ. ವೈದ್ಯಕೀಯ ಸಂಶೋಧನೆ ಮತ್ತು ಚಿಕಿತ್ಸೆಗಳ ಕ್ಷೇತ್ರಗಳಲ್ಲಿ ಜಾಗತಿಕ ಮಟ್ಟದ ರಾಜಕೀಯ ಯಾವರೀತಿ ಕ್ರಿಯಾನಿರತವಾಗಿದೆ ಎಂಬುದಕ್ಕೆ ಕ್ವಿನ್‌ಕ್ರಿನ್ ಗರ್ಭನಿರೋಧವಿಧಾನ ಒಂದು ಉದಾಹರಣೆಯಷ್ಟೆ. ಇದೇ ಮೊದಲಿನದೂ ಅಲ್ಲ. ಭಾರತವು ಜಗತ್ತಿನ ಮಾರುಕಟ್ಟೆಯ ಹಿರಿಯಣ್ಣಗಳ ಒತ್ತಡಕ್ಕೆ ಬಲಿಯಾಗುತ್ತಾ ಉದಾರೀಕರಣಕ್ಕೆ ತನ್ನನ್ನು ತೆತ್ತುಕೊಳ್ಳುತ್ತಿರುವಂತೆ ಈ ರಾಜಕೀಯ ಕೈವಾಡ ಹೆಚ್ಚು ಹೆಚ್ಚು ವೇಗ ಮತ್ತು ತೀವ್ರತೆ ಪಡೆದುಕೊಳ್ಳುತ್ತಿದೆ. ಬೇರೆ ಬೇರೆ ದೇಶಗಳಲ್ಲಿ ಬಳಸಿ ನಿರುಪಯುಕ್ತ ಅಥವಾ ತೀವ್ರ ಅಪಾಯಕಾರಿ ಎಂದು ತಿರಸ್ಕೃತವಾದ ಎಷ್ಟೋ ಬಗೆಯ ಔಷಧಗಳು ಭಾರತಕ್ಕೆ ಸಾರಾಸಗಟಾಗಿ ರವಾನೆಯಾಗುತ್ತಿವೆ. ವಿದೇಶೀಯ ಕಂಪನಿಗಳು ತಮ್ಮ ಉದ್ಯಮದ ಲಾಭವನ್ನು ಕಾಪಾಡಿಕೊಳ್ಳಲು ಹೂಡುವ ನಾನಾ ಪ್ರಚಾರಕತೆ, ಹಾಗೂ ಸಂಚುಗಳಿಗೆ ಭಾರತದಂಥ ಅಭಿವೃದ್ಧಿಶೀಲ ದೇಶಗಳ ವ್ಯಾಪಾರಿ ಮನೋಧರ್ಮದ ಜನತೆ ಸುಲಭವಾಗಿ ವಶವಾಗುತ್ತಾರೆ. ಲಾಭದ ಆಸೆಬಡುಕರಾದ ವೈದ್ಯರು ಸರಿಯಾದ ಪ್ರಮಾಣಿತವಲ್ಲದ ಹಾಗೂ ಅಪಾಯಕರವೆಂದು ಗುಮಾನಿಯಿರುವ, ಕೆಲವು ಸಲ ಅಪಾಯಕರ ಪರಿಣಾಮ ಖಚಿತವೂ ಆಗಿರುವ ಔಷಧಿಗಳನ್ನೂ ಅಮಾನವೀಯವಾಗಿ ಇಲ್ಲಿನ ಜನರ ಮೇಲೆ ಪ್ರಯೋಗಿಸುತ್ತಿರುವುದು ಹೊಸತೇನಲ್ಲ.

ಕ್ವಿನ್‌ಕ್ರಿನ್ ಎಂಬ ಒಂದು ಮದ್ದು, ಮೊದಲು ಮಲೇರಿಯಾ ನಿರೋಧಕ್ಕಾಗಿ ಹೊಟ್ಟೆಗೆ ಸೇವಿಸುತ್ತಿದ್ದ ಔಷಧಿ. ಅದನ್ನು ಈಗ ಸ್ತ್ರೀಯರ ಜನನೇಂದ್ರಿಯದಲ್ಲಿ ಸೇರಿಸಿ ಗರ್ಭನಿರೋಧದ ವಿಧಾನವಾಗಿ ಬಳಸುವುದು ವ್ಯಾಪಕವಾಗುತ್ತಿದೆ. ಈ ಔಷಧ ಜಗತ್ತಿನ ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ತಿರಸ್ಕೃತವಾದದ್ದು, ವಿಶ್ವ ಆರೋಗ್ಯ ಸಂಸ್ಥೆಯೇ ಅಯೋಗ್ಯವೆಂದು ಸಾರಿ ರದ್ದು ಪಡಿಸಿರುವಂಥದು. ಆದರೆ ಇದರ ಒಳ್ಳೆಯ ಅಥವಾ ದುಷ್ಟ ಪರಿಣಾಮಗಳೇನು ಎಂದು ಪ್ರಯೋಗ ಪರೀಕ್ಷೆಗಳಿಂದ ಎಲ್ಲೂ ಖಚಿತಪಡದಿದ್ದರೂ ಭಾರತದಲ್ಲಿ ಕಳೆದ ಎರಡು ದಶಕಗಳಿಂದ ಖಾಸಗಿಯಾಗಿ ಇದರ ಬಳಕೆಯನ್ನು ಕೆಲವು

ವೈದ್ಯರೇ ಬೆಳೆಸುತ್ತಿದ್ದಾರೆ. ಇವರ ಪ್ರಯೋಗಗಳಲ್ಲಿ ಕೂಡ ಈ ಮದ್ದಿನ ಬಳಕೆಯಿಂದ ಅಡ್ಡ ಪರಿಣಾಮಗಳೇ ಹೆಚ್ಚಾಗಿರುವುದು ಕಂಡು ಬಂದಿದ್ದರೂ ಸ್ತ್ರೀಯರ ಶರೀರಗಳನ್ನು ಇದಕ್ಕೆ ಬಲಿಗೊಡುತ್ತಿರುವುದು ಭಾರತದಂಥ ನಿರಕ್ಷರಸ್ಥ, ಸಂಪ್ರದಾಯಸ್ಥ, ಮೌಢ್ಯತುಂಬಿದ ದೇಶದಲ್ಲಿ ಅತ್ಯಂತ ಆತಂಕಗೊಳ್ಳಬೇಕಾದ ವಿಷಯವಾಗಿದೆ.

ಮೊದಲೇ ಪುರುಷರ ಒಟ್ಟು ಸಂಖ್ಯೆಗಿಂತ ಸ್ತ್ರೀಯರ ಪ್ರತಿಶತಸಂಖ್ಯೆ ಇಲ್ಲಿ ಕೆಳಗಿದೆ. ಸ್ತ್ರೀ ಭ್ರೂಣಹತ್ಯೆ, ಹೆಂಗಸರ ಆರೋಗ್ಯದ ಬಗ್ಗೆ ನಿರ್ಲಕ್ಷ್ಯ ಮುಂತಾದವೂ ಹೆಣ್ಣಿನ ಅಸ್ತಿತ್ವವನ್ನೇ ಇಲ್ಲಿ ಅಸಾಧ್ಯವಾಗಿಸುತ್ತಿರುವ ಪರಿಸ್ಥಿತಿ ಇಲ್ಲಿದೆ. ಇಂಥ ಪರಿಸರದಲ್ಲಿ ಪುರುಷರು, ಪೌರುಷದ ಅಪಕ್ವ ಪರಿಕಲ್ಪನೆ, ಮೌಢ್ಯ ಹಾಗೂ ಧಾರ್ಮಿಕ ನಂಬಿಕೆಗಳ ನೆಪದಿಂದ ಸಂತಾನ ನಿಯಂತ್ರಣ ಚಿಕಿತ್ಸೆಗಳಿಂದ ದೂರವಾಗಿ ಉಳಿದಿರುವುದು, ನಿರಂತರವಾದ ಹೆರಿಗೆಯ ನರಕ ಶಿಕ್ಷೆಯಿಂದ ಹೇಗಾದರೂ ಪಾರಾದರೆ ಸಾಕೆಂದು ಗುಟ್ಟಾಗಿಯಾದರೂ ಹೆಂಗಸರು ಈ ಚಿಕಿತ್ಸೆಗಳಿಗೆ ಒಳಗಾಗಬೇಕಾದ ಒತ್ತಡವನ್ನು ಸೃಷ್ಟಿಸಿದೆ. ಇಂಥ ಸ್ಥಿತಿಯಲ್ಲಿ ಕೆಲವೇ ನಿಮಿಷಗಳಲ್ಲಿ ಯಾವ ಶಸ್ತ್ರಚಿಕಿತ್ಸೆ, ವಿಶ್ರಾಂತಿಗಳ ಅಗತ್ಯವಿಲ್ಲದೆ, ಕಡಿಮೆ ಖರ್ಚಿನಲ್ಲಿ ದೇಹಕ್ಕೆ ತೂರಿಸಿಬಿಡಬಹುದಾದದ್ದೆಂದು ಪ್ರಚಾರ ಪಡೆದಿರುವ ಕ್ವಿನ್‌ಕ್ರಿನ್ ಸಂತಾನ ನಿರೋಧ ವಿಧಾನಕ್ಕೆ ಅಮಾಯಕವಾಗಿ ಸ್ತ್ರೀಯರು ಬಲಿಯಾಗುತ್ತಿರುವುದು ಸಹಜವಾಗಿದೆ. ಸ್ತ್ರೀಯರಿಗೆ ಜೀವ ಉಳಿಸುವ, ಬಿಡುಗಡೆ ತರುವ ಔಷಧಿಯೆಂಬ ಪ್ರಚಾರ ಹೊತ್ತಿರುವ ಈ ಮದ್ದು ವಾಸ್ತವದಲ್ಲಿ ಅವರ ಜೀವಹರಣ ಮಾಡುವ ವಿಷವಾಗಿದೆ.

ಈ ಔಷಧದ ಬಳಕೆಯ ಮಾರಕ ಪರಿಣಾಮಗಳ ಬಗ್ಗೆ ಜನಜಾಗೃತಿಯ ಯತ್ನ ವ್ಯಾಪಕವಾಗಿ ನಡೆಯಬೇಕಾದ್ದು ಅತ್ಯಗತ್ಯ. ಆದರೆ ಅದೇ ಹೊತ್ತಿನಲ್ಲಿ ಹೆಣ್ಣಿನ ಆರೋಗ್ಯ ಮತ್ತು ತಾಯ್ತನಗಳನ್ನು ಕುರಿತ ನಮ್ಮದೇ ಪಾರಂಪಾರಿಕ ವೈದ್ಯಕೀಯ ವಿಧಾನಗಳ ಬಗ್ಗೆ ಕೂಡ ಸಮರ್ಪಕ ಸಂಶೋಧನೆಗಳು ನಡೆಯಬೇಕಾದ್ದು ಅಗತ್ಯವಿದೆ.

ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಸಮೃದ್ಧವಾಗಿ ಬೆಳೆದು ಬಂದ ಆಯುರ್ವೇದ ಚಿಕಿತ್ಸಾ ಪದ್ಧತಿಯಲ್ಲಿ "ಸ್ತ್ರೀರೋಗ ಚಿಕಿತ್ಸೆ" ಎಂಬ ಪ್ರತ್ಯೇಕ ವಿಭಾಗವೇ ಇದೆ. ಈ ಚಿಕಿತ್ಸೆಗಳಲ್ಲಿ ಅಪಾಯಕಾರಿ ಅಡ್ಡ ಪರಿಣಾಮಗಳಿಂದ ಮುಕ್ತವಾದ ಎಷ್ಟೋ ಔಷಧಗಳನ್ನು ಸಂತಾನ ನಿಯಂತ್ರಣಕ್ಕೂ ಅಳವಡಿಸುತ್ತಿದ್ದು, ಈ ದೇಶೀಯ ಚಿಕಿತ್ಸೆಯ ವಿಧಾನವನ್ನು ಅವೈಜ್ಞಾನಿಕವೆಂದೂ, ಅಪಾಯಕಾರಿ ಯೆಂದೂ ತಳ್ಳಿಹಾಕಿ, ಅಮದಾದ, ಆದ್ದರಿಂದ 'ವೈಜ್ಞಾನಿಕ' ಎನಿಸಿಕೊಂಡ ವಿಧಾನಗಳನ್ನು ವೈದ್ಯವೃಂದವು ಬಳಸುತ್ತಿದೆ. ನಾರು, ಬೇರು, ಕಷಾಯಗಳಿಂದ ದೇಹ ಚಿಕಿತ್ಸೆ ನಡೆಸುವುದರ ಪ್ರಯೋಗ ಪರೀಕ್ಷೆಗಳಿಗಾಗಿ, ಆ ಮೂಲಕ ದೇಶೀಯ ಚಿಕಿತ್ಸಾ ವಿಧಾನದ ವೈಜ್ಞಾನಿಕೀಕರಣಕ್ಕಾಗಿ ಶ್ರಮಿಸಲು, ಹಣ ವೆಚ್ಚ ಮಾಡಲು ನಾವು ಸಿದ್ಧರಿಲ್ಲ. ಆದರೆ ಪ್ರಾಣಿಗಳ ಮೇಲೆ ರಾಸಾಯನಿಕ ಔಷಧಗಳ ದುರ್ಬಳಕೆ, ಪರಿಸರ ದುರ್ಬಳಕೆಗಳ ವಿರುದ್ಧ ಜನರು ಪ್ರತಿಭಟಿಸುತ್ತಿರುವ ಹೊತ್ತಿನಲ್ಲಿ ಪ್ರಾಣಿಗಳ ಮೇಲೂ ಪ್ರಯೋಗಕ್ಕೆ ಒಳಪಡಿದಿರುವಂಥ ಮದ್ದನ್ನು ಸ್ತ್ರೀಯರ ಮೇಲೆ ಪ್ರಯೋಗಮಾಡಲು ಹಿಂಜರಿಯಲಾರೆವು.

ಸಂತಾನ ನಿರೋಧದ ವಿಧಾನ ಯಾವ ರೀತಿಯದೇ ಆದರೂ ಸ್ತ್ರೀಯರ ಮೇಲೆ ಅವುಗಳನ್ನು ಪ್ರಯೋಗಿಸುವುದು ಪುರುಷರ ಮೇಲಿನ ವಿಧಾನಗಳಿಗಿಂತ ಹೆಚ್ಚು ಅಪಾಯಕಾರಿಯೇ ಆಗಿವೆ. ಆದ್ದರಿಂದ ಸಂತಾನ ನಿಯಂತ್ರಣದ ಯೋಜನೆ ಅವಶ್ಯಕವಾಗಿ ಸಫಲವಾಗಲೇ ಬೇಕಿದ್ದರೆ ಪುರುಷರ ಮೇಲಿನ ವಿಧಾನಗಳಿಗಿಂತ ಹೆಚ್ಚು ಅಪಾಯಕಾರಿಯೇ ಆಗಿವೆ. ಆದ್ದರಿಂದ ಸಂತಾನ ನಿಯಂತ್ರಣದ ಯೋಜನೆ ಅವಶ್ಯಕವಾಗಿ ಸಫಲವಾಗಲೇ ಬೇಕಿದ್ದರೆ ಪುರುಷರು ಹೆಚ್ಚಾಗಿ ಆ ದಿಕ್ಕಿನತ್ತ ಮುಂದಾಗುವಂತೆ ಜನಜಾಗೃತಿ ಆಗಬೇಕಾಗಿದೆ.

ಬಿ.ಎನ್. ಸುಮಿತ್ರಾಬಾಯಿ.

## ಒಂದು ತಮಿಳು ಹಾಡು

ನನ್ನ ಚಿಕ್ಕ ಮನೆಯ ಬಾಗಿಲವಾಡ
ಹಿಡಿದು ಕೇಳುತ್ತೀ "ಎಲ್ಲಿದ್ದಾನೆ ಮಗ?"
ನಾ ಕಾಣೆ, ಎಲ್ಲಿದ್ದಾನೋ ಮಗ.
ಅವನ ಹೊತ್ತಿದ್ದ ಗರ್ಭ ಇದು
ಕಲ್ಲು ಗವಿಯ ಹಾಗೆ

ಹುಲಿ ಬಂದು ನೆಲೆಸಿ
ತೊರೆದು ಹೋದ ಹಾಗೆ
ಹೋಗು ಆ ರಣಭೂಮಿಯಲ್ಲಿ
ನೋಡು, ಸಿಕ್ಕಿಯಾನು.

– ಪುರನೂರು ಕಾವರ್ ಪೆಂಟು

# ಸ್ವಾತಂತ್ರ್ಯಯೋಧನ ಹೆಂಡತಿ

೧

ಸ್ವಾತಂತ್ರ್ಯ ಸುವರ್ಣೋತ್ಸವ ಅಂದರೇನಜ್ಜಿ?
ಅಜ್ಜಿಯ ತಲೆದಿಂಬಿನಲ್ಲಿ ದೂಡ್ಡಪಾಲು
ಸೆಳೆದುಕೊಳ್ಳುತ್ತಾ ಕೇಳುತಿದೆ ಪುಟ್ಟ ಗಟ್ಟಿ ತಬ್ಬಿ
ತಾರಸಿಯಲ್ಲಿ ಜೇಡಕಟ್ಟಿದೆ ನಾಳೆ ತೆಗೆಯಬೇಕು
ಬಚ್ಚಲಲ್ಲಿ ಪಾಚಿ ತುಂಬಿದೆ ಅಜ್ಜ ಬಿದ್ದಾನು
ಮೊದಲು ಉಜ್ಜಬೇಕು, ತನ್ನದೇ
ವೃದ್ಧಾಪ್ಯದಲ್ಲೂ ಗಂಡನ
ಮುದಿತನದ ಬವಣೆಗಳ ಹೊತ್ತವಳಿಗೆ
'ಸ್ವಾತಂತ್ರ್ಯ' ಪದ ಕಾದೆಣ್ಣೆಯಂತೆ
ಕಿವಿಯೊಳಗೆ ಹೊಕ್ಕು
ಒಳಗಿದ್ದ ನೆನಪುಗಳು ಗರಗರನೆ ತಿರುಗಾಡಿ
ಒಣ ಕಡಲೆ ನೀರಿಗೆ ಬಿದ್ದಂತೆ
ನೆನನೆಂದು ಉಬ್ಬುತ್ತಾ ಹಸಿರುಗಟ್ಟಿ
ನಿಟ್ಟುಸಿರು ಹೊರಚೆಲ್ಲಿ....

೨

ಹತ್ತಲ್ಲವೇ ತನಗೆ ಆಗ
ಇಪ್ಪತ್ತಾಲ್ಕರ ಹರೆಯದವನಿಂದ
ಬಿಗಿದ ತಾಳಿಯ ಭಾರ ಹೊತ್ತಾಗ?
'ಅತ್ತೆಯ ಮನೆಯಾಗೆ ತೊತ್ತಾಗಿ ಇರಬೇಕು.
ಹೊತ್ತಾಗಿ ನೀಡಿದರು ಉಣಬೇಕು'
ಅಮ್ಮನ ಹಾಡಿನ ಸಾಲು ಇಡಿಯಾಗಿ
ತನ್ನ ಬದುಕಿನೊಳಗೇ ತೂರಿ
ಗುಡುಗಾಡಿಸುತ್ತಿದ್ದಾಗ ಎಲ್ಲಿದ್ದ ಇವ ?
ಜೈಲೊಳಗೆ ಎದೆಯುಬ್ಬಿಸಿಕೊಂಡು
ಸ್ವಾತಂತ್ರ್ಯದ ಕನಸು ಕಾಣುತ್ತಿದ್ದ!!
ಮಾವನವರ ಕೋಪ ಅತ್ತೆಯ ಕಣ್ಣೀರು
ಭಾವ, ಮೈದುನರ ತಿರಸ್ಕಾರ
ಓರಗಿತ್ತಿಯರ ಮುಸಿನಗು ನಾದಿನಿಯರ
ತಾತ್ಸಾರ.... ನಾನು ಉಂಡದ್ದೆಷ್ಟು
ಉಳಿಸಿದ್ದೆಷ್ಟು ಲೆಕ್ಕವಿಟ್ಟವರಾರು ?
ಇವನಿಗೋ ಇವನದ್ದೆ ಕಾರುಬಾರು
ಎಲ್ಲಿತ್ತು ಆಗ 'ನಾನು' ಎನ್ನುವ ಈ ಉಸಿರು ?

೩

ಸ್ವಾತಂತ್ರ್ಯಯೋಧನಿವ ಖಾದಿಯಂಗಡಿಯ
ಯಜಮಾನ! ಹೊರ ಹಜಾರದಲ್ಲಿ ಬೈಠಕ್ಕುಗಳು
ಪುಢಾರಿಗಳ ಸಭೆಗಳು ಸಮಾರಾಧನೆಗಳು
ಅವನದ್ದೆ ರಂಗುರಂಗಿನ ವಿಶ್ವ!
''ಕರೆಯಿರಿ ನಿಮ್ಮ ಪತ್ನಿಯನ್ನು'' ಯಾರದ್ದೋ
ಸಲಹೆಗೆ ಸಿದ್ಧ ಉತ್ತರ
''ಛೇ ಛೇ ಅವಳೊಂದು ನಿರಕ್ಷರ ಕುಕ್ಷಿ
ಅದಕ್ಕೇನು ತಿಳಿದೀತು ಸ್ವಾತಂತ್ರ್ಯದ ಸುಗ್ಗಿ''?
ಇವನ ಬಳಗಕ್ಕೆಲ್ಲ ಹಂಡೆಗಟ್ಟಲೆ ಚಹಾವನ್ನೂ
ಬಂಡಿಗಟ್ಟಲೆ ಅನ್ನ ಆಹಾರವನ್ನೂ ಇಳಿಸುತ್ತಿದ್ದ
ಈ ಕೃಶದೇಹಕ್ಕೆ ಪರತಂತ್ರದ ಅರ್ಥ ಮಾತ್ರ
ಮೈಯೊಳಗೆಲ್ಲ ತಾನಾಗೆ ಇಳಿದಿತ್ತು.

೪

ಒಂದಲ್ಲ ಎರಡಲ್ಲ ಹಡೆದದ್ದು
ಸಾಲಾಗಿ ಹತ್ತು!
''ಬೇಡ ನಾನಿನ್ನು ಹೆರಲಾರೆ''
ಹುಲ್ಲೆ ಕಣ್ಣುಗಳ ದೀನಧ್ವನಿ
ಮೇಲೇಳಲಾರದೆ ಮರಾಸದ ಕೆಳಗೆಲ್ಲೋ
ಅಡಗಿಯೇ ಬಿಟ್ಟತ್ತಲ್ಲ?!
ಮಕ್ಕಳ ಹೆಸರು, ಶಾಲೆ, ಉದ್ಯೋಗ ಮದುವೆ
ಎಲ್ಲಕ್ಕೂ ತಾನೊಂದು ಮೂಕಸಾಕ್ಷಿ
ಅಟ್ಟುಹಾಕುವ ಕೆಲಸ, ಹೆತ್ತು ಸಾಕುವ ಕೆಲಸ
ಗೂಟಕ್ಕೆ ಕಟ್ಟಿದ ಹಸು ಸುತ್ತುವ
ಪರಿಧಿಯೊಳಗೆ ಎಲ್ಲಿಯದು ವಿಸ್ತಾರ?!

೫

ಮಗು ಕೊರಳು ತಬ್ಬಿ ಕೇಳುತಿದೆ
ಸ್ವಾತಂತ್ರ್ಯ ಸುವರ್ಣೋತ್ಸವವೆಂದರೇನಜ್ಜಿ
ಮನದೊಳಗೆ ಧಿಗ್ಗನೆದ್ದ ಜ್ವಾಲೆಗಳ ಆರಿಸುತ
ತಣ್ಣಗಿನ ಸ್ವರದಲ್ಲಿ ಅಜ್ಜಿಯುಲಿಯುತ್ತಾಳೆ
''ಅದು ನಿನ್ನಜ್ಜನಂಥ ಗಂಡಸರಿಗೆ ಮಾತ್ರ ಮಗು''.

ಶಾಂತಾನಾಗರಾಜ್

# ಕುಂದದ ಚೇತನ : ಉಮಾಬಾಯಿ ಕುಂದಾಪುರ್

## (1892- 1992)

ಡಾ|| ಜ್ಯೋತ್ಸ್ನಾ ಕಾಮತ್

1965ನೆ ಇಸ್ವಿಯ ಆಗಸ್ಟ್ 13ನೇ ತಾರೀಕು ಧಾರವಾಡದಲ್ಲಿ ಶ್ರಾವಣದ ವರ್ಷಾವೈಭವ. ರಾತ್ರಿ ಒಂಭತ್ತು ಗಂಟೆ ಸುಮಾರಿಗೆ ಆಕಾಶವಾಣಿಯ ವ್ಯಾನು ಗಕ್ ಎಂದು ಮನೆಯೆದುರು ನಿಂತಿತು. ಅರ್ಜೆಂಟ್ ನಿಮಗ ಇದನ್ನ ಕೊಡಂತ ಸಾಹೇಬರು ಹೇಳ್ಯಾರ, ಬಾಯಾರs!' ಎಂದು ಡ್ರಾಯವರ್‌ನು ಚೀಟಿಯೊಂದನ್ನು ಕೈಗಿತ್ತ. 'ಇದೇ ಆಗಸ್ಟ್ 15ರಂದು, ವಾರಕ್ಕೊಂದು ಅರ್ಧಗಂಟೆಯ ಕೊಂಕಣಿ ಕಾರ್ಯಕ್ರಮ ಪ್ರಾರಂಭಿಸಬೇಕೆಂದು ಮಹಾನಿರ್ದೇಶಕರು ಫೋನ್ ಆದೇಶ ನೀಡಿದ್ದಾರೆ! ನಾಳೆ ಬೆಳಿಗ್ಗೆ ಎಂಟು ಗಂಟೆಯ ಹೊತ್ತಿಗೆ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಆಫೀಸಿಗೆ ಬಾ!' ಎಂಬ ಸೂಚನೆ ಅದರಲ್ಲಿತ್ತು. ಮರುದಿನ ಭಾನುವಾರವನ್ನು ಹಾಯಾಗಿ ಕಳೆಯಬಹುದೆಂದು, ಆಗಸ್ಟ ಹದಿನೈದರ ವಿಶೇಷ ಕಾರ್ಯಕ್ರಮದ ಟೇಪನ್ನು ಸಿದ್ಧ ಮಾಡಿ ಡ್ಯೂಟಿ ರೂಮಿನಲ್ಲಿ ಇಟ್ಟು ಮನೆಗೆ ಬಂದು ಒಂದು ತಾಸೂ ಕಳೆದಿರಲಿಲ್ಲ! ತಲೆ ಗಿರ್ ಎಂದಿತು.

ಆದರೆ ಮಾತೃಭಾಷೆ ಕೊಂಕಣಿಯಲ್ಲಿ ಕಾರ್ಯಕ್ರಮ ಪ್ರಸಾರವಾಗುವ ಸಾಧ್ಯತೆ ಖುಷಿಯನ್ನೂ ಕೊಟ್ಟಿತ್ತು. ಮುಂದಿರಿಯುವ ಬಗೆ ಹೇಗೆ? ಏನಿಲ್ಲೆಂದರೆ ಪ್ರಸಿದ್ಧ ಮುಖಂಡರ ಆಶೀರ್ವಚನ, ಕರ್ನಾಟಕದಲ್ಲಿ ಮೊಟ್ಟ ಮೊದಲು ಪ್ರಸಾರವಾಗಲಿದ್ದ ಕೊಂಕಣಿ ಕಾರ್ಯಕ್ರಮಕ್ಕೆ ಬೇಕಿತ್ತು. ಹುಬ್ಬಳ್ಳಿಯಲ್ಲ ವಾಸಿಸುತ್ತಿದ್ದ ಶ್ರೀಮತಿ ಉಮಾಬಾಯಿ ಕುಂದಾಪುರ್ ಹೆಸರು ಆ ಕೂಡಲೇ ಜ್ಞಾಪಕಕ್ಕೆ ಬಂದಿತು. ಒಂದು ಆತಂಕ ಕಳೆದಿತ್ತು. ಸ್ವಲ್ಪ ಸಂಗೀತ, ಕಾರ್ಯಕ್ರಮದ ಆಶಯ, ಮುಂತಾದವನ್ನು ಸೇರಿಸಿ ಮೊದಲ ಕಾರ್ಯಕ್ರಮ ಮಾಡುವ ಧೈರ್ಯ ಬಂದಿತು.

ಮರುದಿನ ಬೆಳಿಗ್ಗೆಯೇ ಉಮಾಬಾಯಿಯವರನ್ನು ಸಂಪರ್ಕಿಸಿ, ಸಂದೇಶವೊಂದನ್ನು ರಿಕಾರ್ಡ ಮಾಡಲು ಬರುವುದಾಗಿಯೂ ಅವರು ಅದನ್ನು ಬರೆದು ಸಿದ್ಧವಾಗಿರಬೇಕಾಗಿಯೂ ತಿಳಿಸಿದ್ದಾಯ್ತು. ಜಯ ಚಾಮರಾಜ ನಗರದ ಅವರಿರುತ್ತಿದ್ದ ಮನೆ 'ಆನಂದಸ್ಮೃತಿ'ಯನ್ನು ಸೇರಿದಾಗ, ನಗುಮುಖದ ಉಮಾಬಾಯಿಯವರು ಸ್ವಾಗತಿಸಿದರು.

ಎಪ್ಪತ್ತರ ಹರೆಯ ಸಮೀಪಿಸುತ್ತಿದ್ದರೂ ಕಪ್ಪಾದ ದಟ್ಟ ಕೂದಲು ಗುಲಾಬಿ ಮಿಶ್ರಿತ ಸಾರಸ್ವತ ಗೌರವರ್ಣ. ಕಡೆದಂತಿದ್ದ ಕಣ್ಣು, ಮೂಗು, ಹಣೆ, ಗಡ್ಡಗಳು. ವಾತ್ಸಲ್ಯ ಭಾವದ ಸೌಮ್ಯ ಮುಖ ಮುದ್ರೆ, ಮಧ್ಯಮ ಎತ್ತರ. ಈ ಮಹಿಳೆ, ಚಿಕ್ಕ ವಯಸ್ಸಿನಲ್ಲಿ ಅದೆಷ್ಟು ಸುಂದರಿಯಾಗಿದ್ದರೋ! ಅನಿಸಿತು. ಕಸ್ತೂರ ಬಾ ಗಾಂಧಿ ಟ್ರಸ್ಟ್ ಮೂಲಕ ಅಸಂಖ್ಯ ಅಸಹಾಯಕ ಮಹಿಳೆಯರಿಗೆ ಬದುಕಿಗೊಂದು ದಾರಿ ಮಾಡಿಕೊಟ್ಟ ಉಮಾಬಾಯಿ, ಉತ್ತರ ಕರ್ನಾಟಕದ ಗ್ರಾಮಾಂತರ ಪ್ರದೇಶಗಳಲ್ಲಿ ಮನೆಮಾತಾಗಿದ್ದರು. ಅವರೊಂದಿಗೆ ನನ್ನ ಮೊದಲ ಭೇಟಿ, ಆಕಾಶವಾಣಿಯ ಸಂದೇಶಕ್ಕಾಗಿ ಈ ರೀತಿ ಘಟಿಸಿತ್ತು. ಕ್ರಮೇಣ ಅವರ ಬದುಕಿನ, ಜೀವನವಿಡೀ ಸ್ವಾತಂತ್ರ್ಯ ಹೋರಾಟ ಹಾಗೂ ಸಾಮಾಜಿಕ ಸೇವೆಯಲ್ಲಿ ಕಳೆದ ಹಿರಿಯ ಚೇತನದ ಪರಿಚಯ ಆಗ ತೊಡಗಿತು.

ಉಮಾಬಾಯಿ ಹುಟ್ಟಿದ್ದು 25-3-1892ರಂದು. ಗೋಳಿಕೇರಿ ಕೃಷ್ಣರಾಯರು ಹಾಗೂ ತುಂಗಾಬಾಯಿ ಅವರ ಏಕೈಕ ಪುತ್ರಿ ಭವಾನಿಯಾಗಿ. ಅವರಿಗೆ ನಾಲ್ವರು ಸೋದರರಿದ್ದರು. ದಕ್ಷಿಣ ಕನ್ನಡ ಜಿಲ್ಲೆಯವರಾದರೂ ಬಾಲ್ಯದಲ್ಲಿಯೇ ಮುಂಬೈಗೆ ಹೋಗಿ ನೆಲೆಸುವ ಸಂದರ್ಭ ಒದಗಿ ಅವರ ಪ್ರಾಥಮಿಕ ಶಿಕ್ಷಣ ಮರಾಠಿಯಲ್ಲಿ ನಡೆಯಿತು. ಕೊಂಕಣಿ ತಾಯ್ನುಡಿ. ಕನ್ನಡ, ಮರಾಠಿಯಲ್ಲದೇ ಗುಜರಾಥಿ, ಹಿಂದಿ, ಇಂಗ್ಲೀಷ್‌ಗಳನ್ನು ಚೆನ್ನಾಗಿ ರೂಢಿಸಿಕೊಂಡಿದ್ದರು. 1905ರಲ್ಲಿ ಸಂಜೀವರಾವ್ ಗೋಳಿಕೇರಿ ಅವರೊಂದಿಗೆ ವಿವಾಹವಾಯಿತು. ಮಾವ ಆನಂದರಾವ್ ಕುಂದಾಪುರರು, ದಕ್ಷಿಣ ಕನ್ನಡದಿಂದ ಮುಂಬೈಗೆ ಹೋಗಿದ್ದ ವಲಸಿಗರಲ್ಲಿ ಪ್ರಮುಖರಾಗಿದ್ದು ಹೈಕೋರ್ಟಿನಲ್ಲಿ ಓರಿಯಂಟಲ್ ಟ್ರಾನ್ಸ್‌ಲೇಟರ್ ಎಂದು ಕೆಲಸ ಮಾಡಿದವರು. ಸಾರಸ್ವತ ಜನಾಂಗದ ಏಳ್ಗೆಗೆ ಶ್ರಮಿಸಿದ್ದೇ ಅಲ್ಲದೇ ಅದಾಗಲೇ ರಾಷ್ಟ್ರೀಯ ಚಳುವಳಿಯಲ್ಲಿ ಆಸಕ್ತಿ ತಳೆದು ಸ್ತ್ರೀ ಶಿಕ್ಷಣ ಪ್ರಸಾರಕ್ಕಾಗಿ ಪರಿಶ್ರಮಿಸುತ್ತಿದ್ದರು. ಏಕೈಕ ಪುತ್ರ ಸಂಜೀವ ಹರೆಯದಲ್ಲೇ ಕ್ಷಯರೋಗಕ್ಕೆ ತುತ್ತಾದ. ಈ ಆಘಾತವನ್ನು ಸಹಿಸಿ, ಚಿಕ್ಕ ವಯಸ್ಸಿನ ಸೊಸೆಯನ್ನು ನಿರಂತರ ದುಃಖದಿಂದ ದೂರವಿರಿಸಲು ಶಿಕ್ಷಣದ ಏರ್ಪಾಡು ಮಾಡಿದರು. ಉಮಾಬಾಯಿ ಮ್ಯಾಟ್ರಿಕ್ ಪರೀಕ್ಷೆ ಪಾಸು ಮಾಡಿ ಮುಂಬೈಯ ಗಾಂವ್‌ದೇವಿ ಮಹಿಳಾ ಸಮಾಜದ ಗೌರವ ಕಾರ್ಯದರ್ಶಿ ಆದರು. ಮಹಿಳೆಯರ ಉನ್ನತಿಯಲ್ಲಿ ಮಾವನಿಗೆ ನೆರವಾದರು.

1920ನೇ ವರ್ಷ ಉಮಾಬಾಯಿಯ ಜೀವನಕ್ಕೆ ಹೊಸ ಆಯಾಮ ಕಲ್ಪಿಸಿತು. ಅತ್ಯಂತ ಜನಪ್ರಿಯ ನಾಯಕರಾಗಿದ್ದ ಲೋಕ ಮಾನ್ಯ ತಿಲಕರ ಅಭೂತ ಪೂರ್ವ ಸ್ಮಶಾನಯಾತ್ರೆ. ಕಾಂಗ್ರೆಸಿಗರ ಸಂಘಟನೆ, ಲಕ್ಷಗಟ್ಟಲೆ ಜನರನ್ನು ಉದ್ರೇಕಗೊಳ್ಳದಂತೆ ನೋಡಿಕೊಂಡ ಸಂದರ್ಭ, ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲುಗೊಳ್ಳಲು ಪ್ರೇರೇಪಿಸಿತು. ಪ್ರತಿಭಟನೆ, ಸ್ವದೇಶಿ, ರಾಷ್ಟ್ರೀಯ ಶಿಕ್ಷಣಗಳು ರೂಪುಗೊಳ್ಳುತ್ತಿದ್ದ ಕಾಲ. ಆಗಿನಿಂದಲೇ ಉಮಾಬಾಯಿ ಖಾದಿ ತೊಡುವ ಸಂಕಲ್ಪ

ಕೈಕೊಂಡರು. 1921ರ ಕಾಂಗ್ರೆಸ್ ಅಧಿವೇಶನದ ಹೊತ್ತಿಗೆ ಒಂದು ಲಕ್ಷ ಕಾಂಗ್ರೆಸ್ ಸದಸ್ಯರನ್ನು ನೋಂದಾಯಿಸುವ ನಿರ್ಧಾರವಾಗಿತ್ತು. ಮುಂಬೈಯಲ್ಲಿ ಉಮಾಬಾಯಿ ಮನೆ ಮನೆಗೂ ಹೋಗಿ ರಾಷ್ಟ್ರೀಯ ಚಳುವಳಿಯಲ್ಲಿ ಸಾಮಾನ್ಯರು ಪಾಲುಗೊಳ್ಳುವಂತೆ ಹುರಿದುಂಬಿಸುವ, ನೋಂದಾಯಿಸುವ ಕಾರ್ಯ ಕೈಕೊಂಡರು.

1923ರಲ್ಲಿ ಆನಂದರಾಯರು, ಸೊಸೆಯೊಂದಿಗೆ ಹುಬ್ಬಳ್ಳಿಯಲ್ಲೇ ನೆಲೆಸಿದರು. ಡಾ|| ನಾ.ಸು. ಹರ್ಡೀಕರರು ಸ್ಥಾಪಿಸಿದ ಭಗಿನಿ ಮಂಡಲಕ್ಕೆ ಉಮಾಬಾಯಿ ತಮ್ಮನ್ನು ಮೀಸಲಿಟ್ಟರು. ಭಗಿನಿ ಮಂಡಲವು ತಿಲಕ್ ಕನ್ಯಾಶಾಲೆ ಪ್ರಾರಂಭಿಸಿತು. ಮಾವ ಕರ್ನಾಟಕ ಪ್ರೆಸ್ ಪ್ರಾರಂಭಿಸಿದರು. ಅಲ್ಲಿದ್ದ ಅವರ ಮನೆ, ಕರ್ನಾಟಕದ ಹಾಗೂ ಹುಬ್ಬಳ್ಳಿ ಮೂಲಕ ಬಂದು ಹೋಗುವ ಕಾಂಗ್ರೆಸ್ಸಿಗರ ಚಟುವಟಿಕೆಗಳ ಕೇಂದ್ರವಾಯಿತು.

ತಿಲಕ್ ಕನ್ಯಾಶಾಲೆಯ ಸದಸ್ಯರು ಗಣೇಶೋತ್ಸವದ ಕಾಲಕ್ಕೆ ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಬೇರೆ ಬೇರೆ ಊರುಗಳಿಗೆ ಹೋಗುತ್ತಿದ್ದರು. ಸ್ವದೇಶಿ, ಖಾದಿ ಹಾಗೂ ಸ್ತ್ರೀ ಶಿಕ್ಷಣದ ಅವಶ್ಯಕತೆಗಳ ಕುರಿತು ಪ್ರಚಾರ ಮಾಡುತ್ತಿದ್ದರು. 1924ರಲ್ಲಿ ಬೆಳಗಾವಿಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ ಏರ್ಪಟ್ಟಿತು. ಮಹಾತ್ಮಾ ಗಾಂಧಿ ಅಧ್ಯಕ್ಷರಾದ ಅಪೂರ್ವ ಸನ್ನಿವೇಶ. ಸೇವಾದಳದ ಸ್ತ್ರೀವಿಭಾಗದ ದಳಪತಿಯಾಗಿ ಉಮಾಬಾಯಿ ಸಾಕಷ್ಟು ದುಡಿದರು. 150 ಮಹಿಳೆಯರು ತರಬೇತಿ ಪಡೆದು ಹಗಲು ರಾತ್ರಿ ಪರಿಶ್ರಮಿಸಿದ್ದ ಕನ್ನಡ ನಾಡಿನ ಈ ಅಧಿವೇಶನ, ಮಹಿಳಾ ಸಂಘಟನೆಯಲ್ಲೂ ಅತ್ಯುತ್ತಮ ಮಾದರಿಯಾಗಿಸುವಲ್ಲಿ ಯಶಸ್ವಿಯಾಗಿತ್ತು.

1932ನೇ ವರ್ಷ ಸ್ವಾತಂತ್ರ್ಯ ಹೋರಾಟಕ್ಕೆ ಕಾವೇರಿತ್ತು. ಉಮಾಬಾಯಿ ಪ್ರಾಂತೀಯ ಡಿಕ್ಟೇಟರ್ ಎಂದು ನೇಮಿಸಲ್ಪಟ್ಟರು. ಚಳುವಳಿಯಲ್ಲಿ ಮುಂಚೂಣಿಯಲ್ಲಿರಲೇ ಬೇಕಾದವರು ಏಕಮಾತ್ರ ಆಧಾರವಾಗಿದ್ದ ಮಾವನವರು ರುಗ್ಣಶಯ್ಯೆಯಲ್ಲಿದ್ದರು. ಆಪ್ತೇಷ್ಟರು ಚಳುವಳಿಯಿಂದ ಹಿಂದೆಗೆಯುವಂತೆ ಕೇಳಿಕೊಂಡರೂ ಉಮಾಬಾಯಿ ವಿಚಲಿತರಾಗಲಿಲ್ಲ. ನಿರೀಕ್ಷಿಸಿದಂತೆ ಬಂಧನವಾಯಿತು. ನಾಲ್ಕು ತಿಂಗಳ ಜೈಲು. ನಾಲ್ಕು ನೂರು ರೂಪಾಯಿಗಳ ದಂಡ ಶಿಕ್ಷೆಯ ರೂಪದಲ್ಲಿ ಒದಗಿತು. ಹಿಂಡಲಗಾ ಆ ಬಳಿಕ ಯರವಡಾ ಜೈಲಿನಲ್ಲಿ, ದಿನ ಕಳೆದರು. ಬಿಡುಗಡೆಗೆ ಕೆಲ ದಿನ ಮೊದಲು ಆನಂದರಾಯರು ನಿಧನ ಹೊಂದಿದರು. ಕೊನೆಗಳಿಗೆಯಲ್ಲಿ ಸೊಸೆಯನ್ನು ನೆನಪಿಸಿಕೊಳ್ಳುತ್ತ ಕರೆಯುತ್ತ ಇದ್ದ ವಿಚಾರ ಉಮಾಬಾಯಿಗೆ ತಿಳಿದಾಗ ತುಂಬ ದುಃಖಿಸಿದರು. ಆಗ ಯರವಡಾ ಜೈಲಿನಲ್ಲಿದ್ದ ಸರೋಜಿನಿ ನಾಯಡು, ಅವರನ್ನು ತುಂಬ ಸಂತೈಸಿದ್ದೇ ಅಲ್ಲದೇ, ಇನ್ನು ಮುಂದೆ ಬಂಧನ-ಜೈಲುವಾಸ ಬೇಡ. ಹೊರಗಿದ್ದುಕೊಂಡೇ ಮಾಡುವ ಕೆಲಸಗಳು ಬೇಕಾದಷ್ಟಿವೆ!' ಎಂದು ಕಿವಿ ಮಾತು ಹೇಳಿದರು. ಜೈಲುವಾಸ ಮುಗಿಸಿ ಉಮಾಬಾಯಿ ಹುಬ್ಬಳ್ಳಿಗೆ ಮರಳಿದರು.

ಕರ್ನಾಟಕ ಪ್ರೆಸ್, ಆವಾರದಲ್ಲಿದ್ದ ತಿಲಕ್ ಕನ್ಯಾಶಾಲೆಗಳನ್ನು ಕಾನೂನು-ಬಾಹಿರಗೊಳಿಸಲಾಗಿತ್ತು. ಆಸ್ತಿ ಪಾಸ್ತಿ ಜಪ್ತಾಗಿದ್ದವು. ಉಮಾಬಾಯಿ ಕಂಗೆಡದೇ ಕರನಿರಾಕರಣೆ ಚಳುವಳಿಯಲ್ಲಿ ಪರೋಕ್ಷವಾಗಿ ತೊಡಗಿಕೊಂಡರು. ಚಳುವಳಿಯಲ್ಲಿ ಬಹಳಷ್ಟು ಗ್ರಾಮೀಣ ಮಹಿಳೆಯರು ಭಾಗವಹಿಸಿ ಬಂಧಿತರಾಗಿದ್ದರು. ಸಿರಸಿ, ಸಿದ್ದಾಪುರ, ಅಂಕೋಲಾ, ಹಿರೇಕೆರೂರ ಮುಂತಾದ ಊರುಗಳಿಂದ ಬಂದವರು. ಹೊತ್ತುಗೊತ್ತಿಲ್ಲದೇ ಅವರನ್ನು ಬಿಡುಗಡೆ ಮಾಡಿ ಪೋಲಿಸರು ಹುಬ್ಬಳ್ಳಿಗೆ ತಂದು ಬಿಟ್ಟು ಬಿಡುವರು. ದಿಙ್ಮೂಢರಾದ ಮಹಿಳೆಯರಿಗೆ ತಮ್ಮ ಊರು ತಲುಪುವ ಬಗೆಯೂ ಗೊತ್ತಿರುತ್ತಿರಲಿಲ್ಲ. ಚಿರಪರಿಚಿತ ಟಾಂಗಾವಾಲಾರು ಅವರನ್ನು ಕರೆತಂದು ಉಮಾಬಾಯಿಯವರಲ್ಲಿ ಬಿಡುವರು. ಅವರನ್ನು ಸುರಕ್ಷಿತವಾಗಿ ಮನೆ ತಲುಪಿಸುವ ಹೊಣೆ ಉಮಾಬಾಯಿಗೆ ಸೇರಿತು. ಭೂಗತನಾಯಕರು ಅದೆಷ್ಟೋ ಬಾರಿ ಅಪರಾತ್ರಿ ಬಂದು ಬಿಡುವರು. ಅವರ ಊಟೋಪಚಾರ, ಧನಸಹಾಯದ ನಿರ್ವಹಣೆ ಹೊತ್ತರು.

1934ರಲ್ಲಿ ಬಿಹಾರದಲ್ಲಿ ಭೂಕಂಪವಾಗಿ ಸಹಸ್ರಾರು ಜನ ನಿರಾಶ್ರಿತರಾದರು. ಡಾ|| ಹರ್ಡಿಕರರ ನೇತೃತ್ವದಲ್ಲಿ ಸೇವಾದಳದಲ್ಲಿ ಪಾಲ್ಗೊಂಡು ಅಲ್ಲಿಯೂ ಹೋದಾಗ ಡಾ|| ರಾಜೇಂದ್ರ ಪ್ರಸಾದರೊಂದಿಗೆ ಕೆಲಸ ಮಾಡುವ ಸುಯೋಗ ಒದಗಿದ್ದನ್ನು ಉಮಾಬಾಯಿ ನೆನಪಿಸಿಕೊಳ್ಳುತ್ತಿದ್ದರು. ವಯಸ್ಕರ ಶಿಕ್ಷಣ ಮಂಡಲಿಯ ಸದಸ್ಯೆಯಾಗಿ ಗುಜರಾಥ್ ಮಹಾರಾಷ್ಟ್ರಗಳಲ್ಲಿ ಕೆಲಸ ಮಾಡಿದರು.

ಗಾಂಧೀಜಿಯವರ ಸಲಹೆಯಂತೆ, 1942ರ ಚಳುವಳಿಯಲ್ಲಿ ಉಮಾಬಾಯಿ ಭಾಗವಹಿಸಲಿಲ್ಲ. ಆ ಬಳಿಕ ಅಂದರೆ 1946 ರಿಂದ ಕಸ್ತೂರಬಾ ರಾಷ್ಟ್ರೀಯ ಸ್ಮಾರಕ ನಿಧಿಯ ಕರ್ನಾಟಕ ವಲಯದ ಮುಖ್ಯಸ್ಥೆ ಆಗಿ ಹದಿನೆಂಟು ವರ್ಷಕಾಲ ಕೆಲಸ ಮಾಡಿದರು. ನೂರಾರು ಗ್ರಾಮ ಸೇವಿಕೆಯರನ್ನು ಶುಶ್ರೂಷೆ ಶಿಶುಸಂಗೋಪನ, ಪ್ರೌಢಶಿಕ್ಷಣಗಳಲ್ಲಿ ತರಬೇತುಗೊಳಿಸಿದರು. ಹಳ್ಳಿಹಳ್ಳಿಗಳಲ್ಲಿ ಗ್ರಾಮಸೇವಾ ಕೇಂದ್ರಗಳನ್ನು ತೆರೆದರು.

ದೇಶಕ್ಕೆ ಸ್ವಾತಂತ್ರ್ಯವೇನೋ ಲಭಿಸಿತು. ಆದರೆ ಗಾಂಧೀಜಿ ರೂಪಿಸಿದ ಗ್ರಾಮ ಮಟ್ಟದ ವಿಧಾಯಕ ಕಾರ್ಯಕ್ರಮಗಳೆಲ್ಲ ಸೊರಗುತ್ತ ನಡೆದವು. ರಾಜಕೀಯ ಅಧಿಕಾರ ಹುದ್ದೆಗಳಿಗಾಗಿ ಮುಖಂಡರೆನಿಸಿಕೊಂಡವರಲ್ಲಿ ಪೈಪೋಟಿ ಪ್ರಾರಂಭವಾದದ್ದು, ಉಮಾಬಾಯಿಯವರಿಗೆ ಸಹಿಸಲಾಗಲಿಲ್ಲ. ರಾಜಕೀಯದಿಂದ ದೂರವಾದರು. ಮಹಿಳೆಯರ ಕಲ್ಯಾಣ ಕಾರ್ಯಕ್ರಮಗಳಲ್ಲಿ ನಾಲ್ಕು ದಶಕಕ್ಕೂ ಮೀರಿ ದುಡಿದ ಅವರ ಅನುಭವದ ಉಪಯೋಗ

ಜನತೆಗಾಗಿ ಪಡೆಯುವ ಬುದ್ಧಿಯೂ ಪಟ್ಟಭದ್ರಾಸಕ್ತ ಕಾಂಗ್ರೆಸಿಗರಿಗೆ ಇರಲಿಲ್ಲ. ಅಸಂಘಟನೆಯಲ್ಲಿ ಸ್ವಯಂ ಹಿತವನ್ನು ಕಂಡುಕೊಳ್ಳುವ ಜನ, ಅವರನ್ನು ದೂರವಿಟ್ಟರು.

ಜವಾಹರಲಾಲ್ ನೆಹ್ರೂ ಅವರಂಥ ರಾಷ್ಟ್ರಮಟ್ಟದ ಅನೇಕ ನಾಯಕರನ್ನು ಉಮಾಬಾಯಿ, ನಿಕಟವಾಗಿ ಬಲ್ಲವರಾಗಿದ್ದರು. ಆದರೆ ರಾಜಕೀಯ ಲಾಭಕ್ಕೆ ಅವರೆಂದೂ ಹವಣಿಸಲಿಲ್ಲ. ಅವರಿಗೆ ಕೊಡಮಾಡಿದ ತಾಮ್ರ ಪತ್ರ ಪ್ರಶಸ್ತಿ ಸ್ವೀಕರಿಸಲು ದಿಲ್ಲಿಗೂ ಹೋಗಲಿಲ್ಲ. ಪಕ್ಕಿನಿಂದ ಪಡೆಯಬಹುದಾಗಿದ್ದ ಸ್ವಾತಂತ್ರ್ಯಯೋಧರ ಗೌರವ ಧನವನ್ನೂ ಸ್ವೀಕರಿಸಲಿಲ್ಲ. ಫಲಾಪೇಕ್ಷೆಯಿಲ್ಲದೇ ಸ್ವಾತಂತ್ರ್ಯ ಚಳುವಳಿಯಲ್ಲಿ ಎಲ್ಲವನ್ನು ಕಳೆದುಕೊಂಡ ಹಲವರನ್ನು ತುಂಬ ಹತ್ತಿರದಿಂದ ಕಂಡಿದ್ದರು. ಜೊತೆಗೆ ಸ್ವಾತಂತ್ರ್ಯ ಚಳುವಳಿಯ ಸಂಬಂಧವೇ ಬಾರದೇ ಯಾವತ್ತೂ ಸರಕಾರಿ ಸೌಲಭ್ಯ ಹಾಗೂ ವೇತನಗಳನ್ನು ಗಿಟ್ಟಿಸಿದವರನ್ನೂ ಗುರುತಿಸಬಲ್ಲವರಾಗಿದ್ದರು.

1974ರಲ್ಲಿ ಅವರನ್ನು ಭೇಟಿ ಮಾಡಿದಾಗ, ಕಾರ್ನಾಡ ಸದಾಶಿವರಾಯರ ಕುರಿತು ಹೇಳಿದ್ದರು. ಶ್ರೀಮಂತರ ಓರ್ವಳೇ ಕನ್ಯೆಯನ್ನು ಮದುವೆಯಾದ ಸದಾಶಿವರಾಯರು ಸ್ವತಃ ಹೆಸರುವಾಸಿ ವಕೀಲರಾಗಿದ್ದರು. ಆ ಕಾಲದ ದಕ್ಷಿಣ ಕನ್ನಡ ಜಿಲ್ಲೆಯ ಅತ್ಯಂತ ಸಿರಿವಂತ ಮನೆತನಗಳಲ್ಲಿ ಅವರಗಣತೆಯಾಗುತ್ತಿತ್ತು. ಅಂಥವರು ಸ್ವಾತಂತ್ರ್ಯ ಚಳುವಳಿಯಲ್ಲಿ ಎಲ್ಲವನ್ನೂ ಕಳೆದುಕೊಂಡು ಕೊನೆಗೆ ಯೋಗ್ಯ ಚಿಕಿತ್ಸೆಗೂ ಕಾಸಿಲ್ಲದೇ ಪ್ರಾಣ ಕಳೆದುಕೊಳ್ಳಬೇಕಾದ ಪ್ರಸಂಗ ತಂದುಕೊಂಡರು ಎಂದು ಬೇಸರ ಪಟ್ಟುಕೊಂಡಿದ್ದರು. ''ಭಾರತ ದಾದ್ಯಂತ ಒಂದೇ ಸಮನೆ 1922ರಿಂದ 1942ರ ವರೆಗೆ ಸ್ವಾತಂತ್ರ್ಯ ಯೋಧರೆನಿಸಿಕೊಂಡು ಚಳುವಳಿಯಲ್ಲಿ ಭಾಗವಹಿಸಿ ಜೈಲುಕಂಡವರ ಸಂಖ್ಯೆ ಒಟ್ಟು ಅರವತ್ತು ಸಾವಿರಕ್ಕೆ ಮೀರಿರಲಿಲ್ಲ! ಈಗ ನೋಡಿದೆಯಾ? ವರ್ಷವರ್ಷೆ ಪ್ರತಿರಾಜ್ಯದಲ್ಲಿ ಅವರ ಸಂಖ್ಯೆ ಹೆಚ್ಚುತ್ತಲೇ ಇದೆ! ನಿಜವಾದ ಸ್ವಾತಂತ್ರ್ಯ ಯೋಧರನ್ನು ಚರಿತ್ರ ಗಮನಿಸುವಂತಾದರೆ, ಜನರು ಅಂಥವರನ್ನು ಗುರುತಿಸುವಂತೆ ಆಗುತ್ತಿತ್ತು. ನಮ್ಮಂಥವರಿಗೆ ಕೊಂಚ ನೆಮ್ಮದಿ ಸಿಗುತ್ತಿತ್ತು!' ಎಂದು ನೊಂದು ನುಡಿದಿದ್ದರು.

ಎಲ್ಲಿಯ ನೆಮ್ಮದಿ? ದೇಶಕ್ಕಾಗಿ, ಸ್ವಂತನಾಡಿನ ಏಳ್ಗೆಗಾಗಿ ತನ್ನ ದುಃಖಮರೆತು ದೇಹ ಮುಡುಪಿಟ್ಟ ಈ ಹಿರಿಯ ಚೇತನಕ್ಕೆ ಸ್ವಂತ ಜೀವನದಲ್ಲಿ ನೆಮ್ಮದಿ ಕೊನೆಗೂ ಲಭಿಸಲಿಲ್ಲ. ದತ್ತು ಮಗ ರಮಾಕಾಂತ ಗೋಳಿಕೇರಿ, 1964ರಲ್ಲಿ ನಿಧನ ಹೊಂದಿದರು. ನಂಬಿಕೆಯ ಮೇಲೆ ವಹಿಸಿಕೊಟ್ಟಿದ್ದ, ತುಂಬ ಹಿಂದೆ ಜಪ್ತಾಗಿ ಮರಳಿ ಪಡೆದಿದ್ದ ಕರ್ನಾಟಕ ಪ್ರೆಸ್ ಭೂಮಿ ಮತ್ತಿತರ ನಿವೇಶನಗಳು ಇನ್ನೊಬ್ಬರ ಪಾಲಾದವು. ಮಾವನ ನೆನಪಿಗೆಂದು ಕಟ್ಟಿಸಿದ ಮನೆಯಲ್ಲಿ, ಜೀವನದುದ್ದಕ್ಕೂ ನೆಚ್ಚಿಕೊಂಡ ನಿರಾಡಂಬರ ಜೀವನವನ್ನು ನಡೆಸುತ್ತ ಕೊನೆಯ ದಿನಗಳನ್ನು ಕಳೆದರು. ಹಲವು ರಾಷ್ಟ್ರ ನಾಯಕರ ಕುರಿತಾದ ವೈಯುಕ್ತಿಕವಾದ, ಅವರೊಂದಿಗೆ ಕೆಲಸ ಮಾಡುತ್ತಿದ್ದಾಗಿನ ನೆನಪುಗಳನ್ನು ಉಮಾಬಾಯಿ ಡಾಯರಿ ರೂಪದಲ್ಲಿ ಬರೆದಿಟ್ಟಿದ್ದಾರೆ. ಅವುಗಳೆಲ್ಲ ಬೆಳಕು ಕಾಣುವಂತಾದರೆ, ಅಪೂರ್ವ ಸ್ವಾತಂತ್ರ್ಯಯೋಧಯೋರ್ವರ ಕಣ್ಣಿನಿಂದ ಕಂಡ ಸ್ವಾತಂತ್ರ್ಯ ಹೋರಾಟದ ನಿಕಟ ಚಿತ್ರ ಲಭಿಸಲು ಸಾಧ್ಯ! ●

## ಗಡಂಗಿಗೊದಗಿದ ಗಂಡಾಂತರ !

ನವಲಗುಂದ: ಸುಮಾರು ನಾಲ್ಕೈದು ವರ್ಷಗಳಿಂದ ನವಲಗುಂದ ತಾಲ್ಲೂಕಿನ ಕರ್ಲವಾಡ ಊರಂಚಿನಲ್ಲಿ ಅಕ್ರಮ ಸಾರಾಯಿ ಅಂಗಡಿ ಇತ್ತು. ಪ್ರತಿದಿನ ಸಾಯಂಕಾಲ ನಿತ್ಯ ಕರ್ಮ ಮತ್ತಿತರ ಕಾರ್ಯಕ್ಕಾಗಿ ಓಡಾಡುವ ಸ್ತ್ರೀ ಸಮುದಾಯಕ್ಕೆ ಇದರಿಂದ ಬಹಳ ಕಿರಿಕಿರಿ, ತೊಂದರೆ ಆಗುತ್ತಿತ್ತು. ಅಂಗಡಿಯನ್ನು ಬೇರೆಡೆ ಸಾಗಿಸಿ ಎಂದು ಮಾಡಿಕೊಂಡ ಮನವಿ, ಗೋಗರೆತಕ್ಕೆ ಯಾವುದೇ ಪ್ರತಿಫಲ ಬಾರದೇ ಇದ್ದಾಗ ಅಂತಿಮವಾಗಿ ಪೋಲೀಸರ ಮೊರೆ ಹೋಗುವುದು ಅನಿವಾರ್ಯ ಆಯಿತು. ಆದರೆ ಅಷ್ಟಕ್ಕೇ ಇತ್ಯರ್ಥವಾಗದೇ ಇದ್ದ ಕಾರಣ ಪೋಲೀಸ್ ಸಹಾಯದಿಂದ ಪ್ರಕರಣ ನ್ಯಾಯಾಲಯದ ಕಟ್ಟೆಯನ್ನೂ ಏರಿತು. ಆದರೆ ಸಾರಾಯಿ ಅಂಗಡಿ ಮಾತ್ರ ಮುಚ್ಚಲಿಲ್ಲ.

ಕೊನೆಗೂ ಬೇಸತ್ತು ನೊಂದ ಗ್ರಾಮೀಣ ಮಹಿಳೆಯರು ತಮ್ಮ ತುತ್ತಿನ ಚೀಲಕ್ಕೆ ಸೇರಬೇಕಾದ ಸಂಪಾದನೆ ಕುಡಿತಕ್ಕೆ ಹೋಳಾಗುವುದನ್ನು ತಡೆಗಟ್ಟಲು ನಿರ್ಧರಿಸಿದರು. ಹಿರಿಯರನ್ನು ಸಂಪರ್ಕಿಸಿ ಯೋಜನೆ ಸಿದ್ಧಪಡಿಸಿ ಜಾರಿಗೊಳಿಸಿಯೇ ಬಿಟ್ಟರು.

ರಾಜ್ಯೋತ್ಸವ ದಿನದಂದು ಅನಿರೀಕ್ಷಿತವಾಗಿ ಮದ್ಯದಂಗಡಿಯ ಮೇಲೆ ದಾಳಿ ಮಾಡಿದ ಈ ಗ್ರಾಮೀಣ ಮಹಿಳೆಯರು ಆ ಅಂಗಡಿಯನ್ನು ನೆಲಸಮ ಮಾಡಿದರು. ಪ್ರತಿಭಟಿಸಲು ಬಂದ ಅಂಗಡಿಯ ಮಾಲಿಕನಿಗೆ ಘೇರಾವೂ ಹಾಕಿ ಕೂರಿಸಿ ಇತ್ತ ತಮ್ಮ ಕಾರ್ಯ ಪೂರೈಸಿದರು. ಸಮಾಜದಲ್ಲಿ ಸುಧಾರಣೆ ಬರಬೇಕಿದ್ದರೆ ಮಹಿಳೆಯರ ತಾಳ್ಮೆ, ತ್ಯಾಗ, ಬಲಿದಾನ, ಧೈರ್ಯದಿಂದ ಮಾತ್ರ ಸಾಧ್ಯ ಎನ್ನುವುದನ್ನು ಈ ಮಹಿಳೆಯರು ಸಾಧಿಸಿ ತೋರಿಸಿದರು.

**ಕೃಪೆ : ಪ್ರಜಾವಾಣಿ**

# ಸ್ವಾತಂತ್ರ್ಯ ಹೋರಾಟದ ನೆನಪುಗಳು : ಶ್ರೀಮತಿ ಸರಸ್ವತಮ್ಮ



ಸ್ವಾತಂತ್ರ್ಯಹೋರಾಟದ ಸಂದರ್ಭದಲ್ಲಿ ಕ್ರಿಯಾ ಶೀಲ ರಾಗಿ ಭಾಗವಹಿಸಿದ ಮಹಿಳೆ ಯರ ಬದುಕು, ಹೋರಾಟ ಗಳನ್ನು ಅರಿಯುವ, ದಾಖಲಿಸುವ ಸಂಭ್ರಮ ದಲ್ಲಿದ್ದ ನನಗೆ ಹಿರಿಯ ಗೆಳೆಯರಾದ ಶ್ರೀ ಆನಂದ ರವರು ತಮ್ಮ ಕಾಲದ ಅಭಿಮಾನದಿಂದ ಚಿಕ್ಕ ಮಗಳೂರಿನ ದಿಟ್ಟ ಹೆಣ್ಣುಗಳ ಪರಿಚಯ ಮಾಡಿಸಲು ಉತ್ಸುಕರಾದರು. ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಭಾಗವಹಿಸಿದ್ದ ಶ್ರೀಮತಿ ಸರಸ್ವತಮ್ಮನವರನ್ನು ಜಯನಗರದ ಅವರ ಮನೆಯಲ್ಲಿ ಅಚಲಕ್ಕಾಗಿ ಸಂದರ್ಶಿಸುವ ಅವಕಾಶ ಸಿಕ್ಕಿತು. ಅರವತ್ತೊಂಬತ್ತು ವಯಸ್ಸಿನಲ್ಲೂ ಆರೋಗ್ಯವಂತರಾಗಿ ಹುರುಪಿನಿಂದ ತಮ್ಮ ಹೋರಾಟದ ನೆನಪುಗಳನ್ನು ನಮ್ಮ ಮುಂದೆ ಬಿಚ್ಚಿಕೊಂಡರು ಸರಸ್ವತಮ್ಮನವರು. ಹೋರಾಟದ ಸಂದರ್ಭದಲ್ಲಿಯೇ ಭೇಟಿಯಾಗಿ, ಸಮಾನ ಆಸಕ್ತಿಯ ಕಾರಣದಿಂದಲೇ ವಿವಾಹವಾದ ಸರಸ್ವತಮ್ಮನ ಪತಿ ಶ್ರೀಪುಟ್ಟಸ್ವಾಮಿ ಯವರೂ ವಿದ್ಯಾರ್ಥಿಜೀವನದ ತಮ್ಮ ಹೋರಾಟದ ಅನುಭವಗಳನ್ನು ಪತ್ನಿಯೊಂದಿಗೆ ಹಂಚಿಕೊಂಡರು.

**ಅಚಲ - ನೀವು ಎಂತಹ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದೀರಿ?**

**ಸರಸ್ವತಮ್ಮ** - ನಾನು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದೇ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ. 42ನೇ ಇಸವಿಯ ಸಂದರ್ಭದಲ್ಲಿ ಹೈಸ್ಕೂಲ್ 8ನೇ ತರಗತಿಯಲ್ಲಿ ಓದುತ್ತಿದ್ದೆ. ಆಗ ನಾವು ಪ್ರಭಾತಫೇರಿಗೆ ಹೋಗುತ್ತಿದ್ದಿವಿ. ದೇಶಭಕ್ತಿಗೀತೆಗಳನ್ನು ಹೇಳಿಕೊಡುತ್ತಿದ್ದೆ. ಮೀಟಂಗು ಗಳಲ್ಲಿ ಭಾಷಣಗಳನ್ನು ಮಾಡುತ್ತಿದ್ದೆ. ಮತ್ತೆ ಮನೆ ಮನೆಗೂ ಹೋಗಿ ಹೆಣ್ಣು ಮಕ್ಕಳನ್ನು ಪ್ರಭಾತಫೇರಿಗೆ ಬನ್ನಿ ಅಂತ ಒತ್ತಾಯದಿಂದ ಕರೆಯುತ್ತಿದ್ದೆವು. ಹಾಗೆ ಕರಿಯಲಿಕ್ಕೆ ಹೋದಾಗ ಅವರ ಮನೆಯವರ ಬಳಿ ಉಗಿಸಿಕೊಳ್ಳುತ್ತಿದ್ದೆವು. ಆಮೇಲೆ ಕರಪತ್ರಗಳನ್ನು ಸಂಬಂಧಪಟ್ಟ ಜಾಗಗಳಿಗೆ ತೊಗೊಂಡು ಹೋಗಿ ತಲುಪಿಸುತ್ತಿದ್ದೆವು. ಒಟ್ಟನಲ್ಲಿ ಪ್ರಚಾರ ಮಾಡುತ್ತಿದ್ದೆವು.

**ಅಚಲ - ನಿಮ್ಮ ಈ ಚಟುವಟಿಕೆಗಳಿಗೆ ಪ್ರೋತ್ಸಾಹ, ಪ್ರತಿಕ್ರಿಯೆ ಹೇಗಿತ್ತು?**

**ಸರಸ್ವತಮ್ಮ** - ನಮ್ಮ ಕುಟುಂಬದಲ್ಲಿ ಇಂತಹ ಚಟುವಟಿಕೆಗಳಿಗೆ ಪ್ರೋತ್ಸಾಹ ಎಂದು ಹೇಳಲಾಗದಿದ್ದರೂ ಅಡ್ಡಿಯಿರಲಿಲ್ಲ. ಚಿಕ್ಕಂದಿ ನಲ್ಲೇ ತಂದೆಯನ್ನು ಕಳೆದುಕೊಂಡಿದ್ದೆ. ನನ್ನ ತಾಯಿ ನಾನು ಇಂತಹ ಚಟುವಟಿಕೆಗಳಲ್ಲಿ ತೊಡಗುವುದನ್ನು ವಿರೋಧಿಸಲಿಲ್ಲ. ಗೆಳತಿಯರ ಜೊತೆ ನಾನು ಹೋಗುತ್ತಿದ್ದೆ. ನಮಗಿಂತ ಸೀನಿಯರ್ ಗೆಳತಿಯರಾದ ಸುಬ್ಬಮ್ಮ, ವೈದೇಹಿಯರು ಆ ವೇಳೆಗಾಗಲೇ ಮೈಸೂರಿನಲ್ಲಿ ಕಾಲೇಜು ಓದುತ್ತಿದ್ದರು. ಅವರು ಓದು ಬಿಟ್ಟು ಬಂದು ಚಿಕ್ಕಮಗಳೂರಿನಲ್ಲಿ ಸ್ವಾತಂತ್ರ್ಯ ಹೋರಾಟದ ಚಟುವಟಿಕೆಗಳಲ್ಲಿ ತೊಡಗಿಕೊಂಡಾಗ ನಾವೂ ಅವರಿಂದ ಆಕರ್ಷಿತರಾಗಿ ಅವರ ಜೊತೆಯಲ್ಲಿ ಕೆಲಸ ಮಾಡುತ್ತಿದ್ದೆವು. ನಾವು ವಿದ್ಯಾರ್ಥಿನಿಯರನ್ನು ವಿಶೇಷವಾಗಿ ಸಂಘಟಿಸುತ್ತಿದ್ದೆವು.

**ಅಚಲ - ನಿಮ್ಮ ಜೊತೆ ಭಾಗವಹಿಸಿದ ಮಹಿಳೆಯರು ಯಾವ ವರ್ಗದಿಂದ ಬಂದವರು?**

**ಸರಸ್ವತಮ್ಮ** - ನಮ್ಮ ಜೊತೆ ಇದ್ದ ಮಹಿಳೆಯರು ಸಾಮಾನ್ಯವಾಗಿ ಮಧ್ಯಮವರ್ಗದ ಮಹಿಳೆಯರು ಆದರೆ ನಾವು ಪ್ರಭಾತಫೇರಿಗೆ ಹೋದಾಗ ಅಲ್ಲಲ್ಲಿ ನಿಂತು ಪಾನಕ, ನೀರು, ಮಜ್ಜಿಗೆಯನ್ನು ಕೆಲವು ಶ್ರೀಮಂತ ಮಹಿಳೆಯರು ಕೊಟ್ಟು ತಮ್ಮ ಬೆಂಬಲ ಸೂಚಿಸುತ್ತಿದ್ದರು.

**ಅಚಲ - ನಿಮ್ಮ ಜೈಲುವಾಸದ ಕುರಿತು ಹೇಳುತ್ತೀರಾ ?**

**ಸರಸ್ವತಮ್ಮ** - ಪ್ರಭಾತಫೇರಿಗೆ ಹೋಗಬೇಕಾಗಿ ಬಂದಾಗ ಪೋಲಿಸ್ ಸ್ಟೇಷನ್ ಮುಂದೆ ಹೋಗಬಾರದು ಅಂತ ನಮ್ಮನ್ನು ತಡೆಯುತ್ತಿದ್ದರು. ಆಗ ನಾವು ಹೋಗಿಯೇ ಹೋಗುತ್ತೇವೆಂದಾಗ ನಮ್ಮನ್ನು ಅರೆಸ್ಟ್ ಮಾಡಿದರು. ನಾನು, ಸುಬ್ಬಮ್ಮ, ವೈದೇಹಿ ಮತ್ತು ಜಯಲಕ್ಷ್ಮೀ ಅಂತ ನಾಲ್ವರು ಹುಡುಗಿಯರನ್ನು ಅರೆಸ್ಟ್ ಮಾಡಿದರು.

ಮತ್ತೆ ಅಲ್ಲಿನ ಕಾನ್ವೆಂಟ್ ಸ್ಕೂಲಿಂಗ್‌ನ್ನು ಪಿಕೆಟಿಂಗ್ ಮಾಡುತ್ತಿದ್ದಾಗ ವಿದ್ಯಾರ್ಥಿಗಳನ್ನು ಶಾಲೆಗೆ ಹೋಗದಂತೆ ತಡೆಯು ತ್ತಿದ್ದೆವು. ಆ ಸಂದರ್ಭದಲ್ಲಿ ಯಾರೋ ಕಿಡಿಗೇಡಿಗಳು ಒಂದೆರಡು ಕಲ್ಲನ್ನು ಎಸೆದು ಶಾಲೆಯ ಕಿಟಕಿ ಗಾಜು ಒಡೆದು, ಹೂವಿನ ಕುಂಡ ಗಳನ್ನು ಹಾಳು ಮಾಡಿದ್ದರು. ಆ ಅಪರಾಧವನ್ನು ನಮ್ಮ ಮೇಲೆ ಹೊರಿಸಿ ಕೇಸು ಹಾಕಿದ್ದರು. ಸುಮಾರು ಎರಡೂವರೆ ತಿಂಗಳ ಮೇಲೆ ಜೈಲಿನಲ್ಲಿದ್ದಿವಿ.

ಅಚಲ - ಜೈಲಿನಿಂದ ಹೊರ ಬಂದ ನಿಮ್ಮನ್ನು ಸಮಾಜ ಹೇಗೆ ಸ್ವೀಕರಿಸಿತು ?

ಸರಸ್ವತಮ್ಮ - ಜೈಲಿಗೆ ಹೋಗಿ ಬಂದ ನಮ್ಮನ್ನು ಕುರಿತ ಪ್ರತಿಕ್ರಿಯೆ ತೀಕ್ಷ್ಣವಾಗಿಯೇ ಇತ್ತು. ಸುತ್ತಮುತ್ತಲಿನವರು ನಮ್ಮನ್ನು ಸರಿಯಾಗಿ ಮಾತನಾಡಿಸುತ್ತಿರಲಿಲ್ಲ. ಜೊತೆಯ ಸಹಪಾಠಿಗಳೂ ಕೂಡ ನಮ್ಮನ್ನು ವಿಚಿತ್ರವಾಗಿ ಕಾಣುತ್ತಿದ್ದರು. ಅಧ್ಯಾಪಕರುಗಳೂ ನಿಮಗೆ ಪಾಠ ಅರ್ಥವಾಯಿತಾ ಇಲ್ಲವಾ ಎಂದು ಅಸಡ್ಡೆಯಿಂದಲೇ ಕಾಣುತ್ತಿದ್ದರು. ಒಟ್ಟಿನಲ್ಲಿ ಎಲ್ಲರೂ ನಮ್ಮನ್ನು ಅಸ್ಪೃಶ್ಯರಂತೆ ಭಾವಿಸುತ್ತಿದ್ದರು. ಆದರೂ ಇದನ್ನೆಲ್ಲಾ ಲೆಕ್ಕಿಸದೆ ಹೇಗೋ ಒಂದು S.S.L.C. ಅಂತ ಮುಗಿಸಿ ನೌಕರಿಗೆ ಸೇರಿಕೊಂಡೆ.

ಅಚಲ - ಸ್ವಾತಂತ್ರ್ಯಾನಂತರ ನೀವು ಯಾವ ರೀತಿ ಕ್ರಿಯಾಶೀಲರಾಗಿದ್ದೀರಿ ?

ಸರಸ್ವತಮ್ಮ - ಸ್ವಾತಂತ್ರ್ಯಾನಂತರ ನಾನು ನೌಕರಿಗೆ ಸೇರಿದೆ. ಆಮೇಲಿನ ನನ್ನ ಕ್ರಿಯಾಶೀಲತೆಯೆಲ್ಲಾ ಮಕ್ಕಳು, ಮರಿ, ಗಂಡ ಇಷ್ಟರಲ್ಲೆ ಆಗಿಹೋಯ್ತು. ಯಾವುದಾದರೂ ಒಳ್ಳೆಯ ಸಾರ್ವಜನಿಕ ಭಾಷಣ, ಸಭೆ ಇದ್ದರೆ ಹೋಗಿದ್ದುಂಟು. ಆದರೂ ಮಕ್ಕಳು, ಈ ಸಂಸಾರದಲ್ಲಿ ಮುಳುಗಿದ ಮೇಲೆ ಉಳಿದೆಲ್ಲಾ ಗೌಣವಾಗಿಬಿಟ್ಟಿತು.

ಅಚಲ - ಹೆಂಗಸರಿಗೆ ಸ್ವಾತಂತ್ರ್ಯ ಚಳುವಳಿಯಲ್ಲಿ ಪ್ರಾಧ್ಯಾನ್ಯತೆ ಕೊಡಲಿಲ್ಲ, ಎನ್ನುವ ಅಭಿಪ್ರಾಯವಿದೆ. ನಿಮ್ಮ ಅನುಭವದ ಹಿನ್ನೆಲೆಯಲ್ಲಿ ಏನು ಹೇಳುತ್ತೀರಾ ?

ಸರಸ್ವತಮ್ಮ - ನಾನು ಸ್ವಂತ ಇಚ್ಛೆಯಿಂದಲೇ ಹೋದೆ. ಆಗ ನಾವು ಮಾಡಬೇಕೆಂದುಕೊಂಡ ಕೆಲಸಗಳನ್ನು ಮಾಡಲು ಯಾವ ಪುರುಷರೂ ಅಡ್ಡಿ ಬರಲಿಲ್ಲ. ಇನ್ನೂ ಪ್ರೋತ್ಸಾಹಿಸಿದರು. ●

---

# ಅವಳ ನಿರ್ಧಾರ

ಒಕ್ಕಾರ್ ಮಚಾತ್ತಿಯಾರ್, ಪುರನೂರು
(ಆಂಗ್ಲಮೂಲ : Women writing In India
ಅನು: ಸುಮಿತ್ರ)

ಅವಳ ನಿರ್ಧಾರ ಭಯಂಕರ, ಅವಳಾತ್ಮ ಕ್ರೂರಿ,
ಹಳೆಯ ಮನೆಯಾಕೆ ಅನ್ನೋದು ನಿಜವೇ.
ಮೊನ್ನೆದಿನ ಅವಳಪ್ಪ
ರಣಭೂಮಿಯಲ್ಲಿ
ಆನೆಯೊಂದರ ಮೇಲೆರಗಿ
ಹೋರಾಟ ಕಣದಲ್ಲಿ ಮಡಿದ.
ನೆನ್ನೆ ದಿನ, ಕೈ ಹಿಡಿದಾತ
ಸೈನ್ಯಗಳ ಸಾಲುಗಳೆದುರು
ಕೈದುತ್ತ ಉರುಳಿದ.

ಇಂದು,
ಮತ್ತೆ ರಣಭೇರಿ ಕೇಳಿಸಿದೆ ಅವಳಿಗೆ.
ತನಗರಿಯದ ಕಾತರದಲ್ಲಿ
ಅವನಿಗೊಂದು ಈಟಿಯ ಕೊಡುವಳು
ಅವನಿಗೊಂದು ಬಿಳಿಯಾಂಗಿ ತೊಡಿಸುವಳು
ಅವನ ಬರಗೂದಲಿಗೆ ಎಣ್ಣೆ ತೊಡೆಯುವಳು
ಅವಳಿಗೀಗ ಉಳಿದಿರುವುದು
ಅವನೊಬ್ಬ ಮಗ ಮಾತ್ರ.
"ಹೋಗು" ಎಂದು ಆಣತಿಯಿತ್ತು
ಕಳುಹುತ್ತಾಳೆ ರಣಕ್ಕೆ .

# ಸ್ವಾತಂತ್ರ್ಯ ಸಂಗ್ರಾಮದ ಓರ್ವ ಸ್ವಾಭಿಮಾನಿ ಮಹಿಳೆ - ಅತ್ತರ್ ಕೌರ್

- ನೇಮಿಚಂದ್ರ



ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದ ಪುಟಗಳಲ್ಲಿ, ಎಲ್ಲೋ ಒಂದು ಕಡೆ ಕಂಡ ಹೆಸರು - 'ಅತ್ತರ್ ಕೌರ್'. ಜಲಿಯನ್ ವಾಲಾ ಬಾಗ್ ದುರಂತದಲ್ಲಿ ಹುತಾತ್ಮನಾದ ಪತಿಯ ಹೆಣಕ್ಕೆ ಹೆಗಲು ಕೊಟ್ಟು ಮನೆಗೆ ಹೊತ್ತು ತಂದ ಗರ್ಭಿಣಿ ಅತ್ತರ್ ಕೌರ್, 25,000 ರೂಗಳನ್ನು ನಿರಾಕರಿಸಿದ ಸ್ವಾಭಿಮಾನಿ ಮಹಿಳೆ. 'ನನ್ನ ಪತಿಯನ್ನು ಕಿತ್ತುಕೊಂಡರೇನು, ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಮಡಿಯಲು ನನ್ನಲ್ಲಿನ್ನೂ ಇಬ್ಬರು ಗಂಡು ಮಕ್ಕಳಿದ್ದಾರೆ' ಎಂದು ಸಾರಿದ ಮಹಿಳೆ. ಆಕೆಯ ಗರ್ಭದಲ್ಲಿದ್ದ ಕೂಸು, ಇಂದು 78 ವರ್ಷಗಳ ವಯೋವೃದ್ಧ ಸ್ವಾತಂತ್ರ್ಯ ಹೋರಾಟಗಾರ ಸೋಹನ್ ಲಾಲ್ ಭಾರತಿ. ಇವರು ಅಮೃತ್‌ಸರದಲ್ಲಿಯೇ ವಾಸಿಸುತ್ತಿದ್ದಾರೆ ಎಂದು ತಿಳಿದಾಗ, ಈ ಮಹಾಮಾತೆಯ ಬಗ್ಗೆ ತಿಳಿವ ಆಸ್ಥೆ, ನನ್ನನ್ನು ಅಮೃತ್‌ಸರಕ್ಕೆ ಕೊಂಡೊಯ್ಯಿತು. ವಿಳಾಸವಿಲ್ಲದೆ, ಹೆಸರು ಮಾತ್ರ ಗೊತ್ತಿದ್ದ ನಾನು, 'ಸೋಹನ್ ಲಾಲ್ ಭಾರತಿ, ಜಲಿಯನ್‌ವಾಲಾ ಬಾಗ್ ಹುತಾತ್ಮರ ಪತ್ನಿ ಅತ್ತರ್ ಕೌರ್ ಅವರ ಪುತ್ರ, ಕೇರಾಫ್ ಜಲಿಯನ್‌ವಾಲಾ ಬಾಗ್' ಎಂದು ಹಿಂದಿಯಲ್ಲಿ ಬರೆದ ಪತ್ರ ಎಂಟು ದಿನಗಳ ನಂತರ ಅವರಿಗೆ ತಲುಪಿದ್ದೊಂದು ಆಶ್ಚರ್ಯ. ಜಲಿಯನ್‌ವಾಲಾ ಬಾಗ್‌ನ ಕಛೇರಿಯಲ್ಲಿ ತಮ್ಮ ವಿಳಾಸ ಕೊಟ್ಟು, ಆ ದಿನ ನನಗಾಗಿ ಕಾಯುತ್ತಿದ್ದರು ಸೋಹನ್‌ಲಾಲ್ ಭಾರತಿ.

ಸಣ್ಣ ಗಲ್ಲಿಯೊಂದರ ಹಳೆಯ ಚಿಕ್ಕ ಮನೆಯಲ್ಲಿ ತಮ್ಮ ತಾಯಿಯ ನೆನಪುಗಳನ್ನು ಭಾರೀ ಗಾತ್ರದ ಫೈಲ್‌ಗಳ ತುಂಬಾ ಕಾದಿರಿಸಿರುವ ಸೋಹನ್ ಲಾಲ್, ಈ ವೀರಮಾತೆಯ ಬದುಕಿನ ಪುಟಗಳನ್ನು ನನ್ನೆದುರು ಹರವಿಟ್ಟರು. 1896ರಲ್ಲಿ ಹುಟ್ಟಿದ ಅತ್ತರ್ ಕೌರ್, 1910ರಲ್ಲಿ ಭಾಗಮಲ್ ಭಾಟಿಯಾ ಅವರನ್ನು ವಿವಾಹವಾಗಿದ್ದರು. ಭಾಟಿಯಾ, 'ಲಕಡಿಮಂಡೀ ಬಸಾರ್'ನಲ್ಲಿ ಅಂಗಡಿ ಇದ್ದ ಸ್ಥಿತಿವಂತ ವ್ಯಾಪಾರಿ. 1917ರಲ್ಲಿ ಅಮೃತ್‌ಸರದಲ್ಲಿ ಕಾಂಗ್ರೆಸ್ ಶಾಖೆ ತೆರೆದಾಗ, ಭಾಗಮಲ್ ಭಾಟಿಯಾ ಕಾಂಗ್ರೆಸ್‌ನ ಸಕ್ರಿಯ ಕಾರ್ಯಕರ್ತರಾಗಿ ಸ್ವಾತಂತ್ರ ಹೋರಾಟದಲ್ಲಿ ತೊಡಗಿದರು. ದಿನವೂ ಅತ್ತರ್ ಕೌರ್ ಐದಾರುಜನ ಸ್ವಾತಂತ್ರ್ಯ ಹೋರಾಟಗಾರರಿಗಾದರೂ ಅಡುಗೆ ತಯಾರಿಸಿ ಅಂಗಡಿಗೆ ಕಳುಹಿಸುತ್ತಿದ್ದರು. ಅತ್ತರ್ ಕೌರ್ ಹೆಚ್ಚು ಓದಿದವರಲ್ಲ. ರಾಮಾಯಣ ಮಹಾಭಾರತ ಓದುವಷ್ಟು ಮಾತ್ರ ಅವರ ಶಿಕ್ಷಣ. ಧಾರ್ಮಿಕ ಕೆಲಸಗಳಲ್ಲಿ ತೊಡಗಿದ ಅತ್ತರ್ ಕೌರ್‌ಗೆ ಪತಿಯಿಂದ ದೇಶದ ಸಾಮಾಜಿಕ ಹಾಗೂ ರಾಜಕೀಯ ಸ್ಥಿತಿಗತಿಗಳು ತಿಳಿಯತೊಡಗಿದವು.

13, ಏಪ್ರಿಲ್ 1919, ಅಂದು ವೈಶಾಖಿ, ಹಿಂದು ಹೊಸ ವರ್ಷದ ಸಂಭ್ರಮದ ದಿನ. ಪಂಜಾಬಿ ಜನಗಳಿಗೆ ವಿಶೇಷ ಮಹತ್ವದ ಹಬ್ಬ. ಅಂದು ಬೆಳಗ್ಗೆ ಅತ್ತರ್ ಕೌರ್ ಪತಿಯೊಡನೆ ಸ್ವರ್ಣಮಂದಿರಕ್ಕೆ ಹೋಗಿ 'ಹರಮಂದಿರ್'ನಲ್ಲಿ 'ಹಣೆಯುಜ್ಜಿ' ಪ್ರಾರ್ಥಿಸಿದ್ದರು. ಪತಿಯ ದೀರ್ಘಾಯುಷ್ಯವನ್ನು ಬೇಡಿದರು. ಮಧ್ಯಾಹ್ನ ಎರಡು ಗಂಟೆಗೆ ಮಕ್ಕಳಿಗೆ ಮಿಠಾಯಿ ತಂದು ಕೊಟ್ಟ ಪತಿ, ಜಲಿಯನ್ ವಾಲಾಬಾಗ್‌ನಲ್ಲಿ ಸಭೆಗೆ ಹೋಗುತ್ತಿದ್ದೇನೆಂದು ಹೇಳಿ ಹೋಗಿದ್ದರು.

ಆ ದಿನ ಸಂಜೆ ಐದು ಗಂಟೆ ದಾಟಿತ್ತು, ರಕ್ತದಲ್ಲಿ ತೊಯ್ದ ಬಾಬು ಸುಂದರದಾಸ್ ಮತ್ತು ಬೂಟಾರಾಮ್ ಓಡೋಡಿ ಬಂದು 'ಜಲಿಯನ್‌ವಾಲಾ ಬಾಗ್... ಗುಂಡು ಹಾರಿಸಿದರು... ಭಾಯಿ ಸಾಹಬ್ ಅಲ್ಲಿ...' ಎನ್ನುತ್ತಿದ್ದಂತೆ ಅತ್ತರ್ ಕೌರ್ ಎದೆ ಕುಸಿಯಿತು. ಗಾಬರಿಗೊಂಡ ಅತ್ತೆ ಮತ್ತು ಸಣ್ಣ ಇಬ್ಬರು ಮಕ್ಕಳನ್ನು ಮನೆಯಲ್ಲಿ ಬಿಟ್ಟು ಒಂದೇ ಉಸುರಿಗೆ ಎರಡು ತಿಂಗಳ ಗರ್ಭಿಣಿ ಅತ್ತರ್ ಕೌರ್ ದಾಪುಗಾಲಿನಲ್ಲಿ ಜಲಿಯನ್‌ವಾಲಾ ಬಾಗ್‌ನೆಡೆಗೆ ಓಡ ತೊಡಗಿದರು. ಗಲ್ಲಿಗಳುದ್ದಕ್ಕೂ ಭಯಭೀತ ಜನ ಬಾಗ್‌ನಿಂದ ಹೊರಕ್ಕೆ ಓಡುತ್ತಿದ್ದರು. ರಕ್ತದಲ್ಲಿ ತೊಯ್ದ ಜನ. ಪಶ್ಚಿಮದ ದ್ವಾರದಿಂದ ಒಳ ಬಂದೊಡನೇ ದ್ವಾರದ ಉದ್ದಕ್ಕೂ ಸತ್ತ ಜನರ ಶವಗಳು. ಬಾಗ್‌ನ ತುಂಬಾ ರಾಶಿ ರಾಶಿ ಹೆಣಗಳು. ಸಾವಿರಾರು ಜನರ ಓಟದ ಕಾಲ ಕೆಳಗೆ ತುಳಿದು ಮುಗಿಲಿಗೆದ್ದು ಮುಸುಕಿದ ಕೆಂಪು ಧೂಳು. 'ಅಯ್ಯೋ ಸತ್ತೆ, ಕಾಪಾಡಿ, ನೀರು' ಗಾಯಗೊಂಡವರ ಕೂಗು ಎದೆ ಸೀಳಿತ್ತು. ಒಂದೆಡೆ, ಒಂದೇ ಥಾನಿನ ಬಟ್ಟೆ ತೊಟ್ಟ ಐದು ಮಕ್ಕಳು ಹತರಾಗಿ ಬಿದ್ದಿದ್ದರು. ಹೆಣಗಳ ಬಣಬೆಯ ನಡುವಿನಿಂದ ಗಾಯಗೊಂಡು ನರಳಿದ ಒಂದು ಕ್ಷೀಣ ಸ್ವರ, 'ಬೆಹನ್, ನನ್ನ ಮಗು ಬದುಕಿದೆಯ ಸ್ವಲ್ಪ ನೋಡು', ಅತ್ತರ್ ಕೌರ್ ಮಗುವನ್ನು ಮುಟ್ಟಿ ನೋಡಿದರು. ಉಸಿರು ಕಡಿದು ತಣ್ಣಗಾಗಿದ್ದ ಮಗುವನ್ನು 'ಬದುಕಿದೆ' ಎಂದರು. ಆ ಮನುಷ್ಯ 'ಹೇ ರಾಮ್' ಎಂಬ ನಿಶ್ಚಿಂತೆಯಲ್ಲಿ ಉಸಿರು ಜಾರಿಸಿ, ತಲೆ ವಾಲಿ ಸತ್ತು ಬಿದ್ದ.

ಅತ್ತರ್ ಕೌರ್ ಸಾವಿರಾರು ಹೆಣಗಳ ನಡುವೆ, ರಕ್ತಸಿಕ್ತ ನೆಲದಲ್ಲಿ ತಮ್ಮ ಪತಿಯ ದೇಹವನ್ನು ಹುಡುಕತೊಡಗಿದರು. ಸತ್ತವರ,

ಸಾಯುತ್ತಿರುವವರ ಆಕ್ರಂದನದ ಮಧ್ಯೆ ಆ ಕ್ಷಣದಲ್ಲಿ ಅವರಿಗೆ ಕೇಳುತ್ತಿದ್ದುದು ನಗಾರಿಯಂತೆ ಬಾರಿಸುತ್ತಿದ್ದ ತಮ್ಮ ಎದೆಯ ಬಡಿತವೊಂದೆ. ಹೆಣಗಳನ್ನು ಎತ್ತಿ ಅಲುಗಿಸಿ ತಮ್ಮ ಪತಿಯ ಮುಖವನ್ನು ಹುಡುಕುವ ಆ ಮಹಿಳೆಯ ಸೀರೆಯೆಲ್ಲ ರಕ್ತಮಯ. ನೆಲದ ಮಟ್ಟಕ್ಕಿದ್ದ ಅಗಲ ಭಾವಿಯಲ್ಲಿ ಇಣುಕುತ್ತಾರೆ. ಆಳದ ನೀರೆಲ್ಲ ರಕ್ತ ಕೆಂಪು. ಕತ್ತಲಾಗುತ್ತಿದೆ. ನಾಲ್ಕು ಕಡೆಯಲ್ಲೂ ವಿಕೃತ ಶರೀರಗಳ ಭಯಾನಕ ದೃಶ್ಯ. ಯಾರದೋ ಮುಖವೇ ಎಗರಿ ಹೋಗಿದೆ. ಯಾರದೋ ಕಣ್ಣು, ಯಾರದೋ ಎದೆ, ಕೈ, ಕಾಲು ಛಿದ್ರವಾಗಿದೆ. ಸತ್ತವರನ್ನ ಸಾಯುತ್ತಿರುವವರನ್ನ ಬಿಟ್ಟು ಪ್ರಾಣ ಭೀತಿಯಲ್ಲಿ ಜನ ಓಡಿದ್ದಾರೆ. ಕಾರಣ ರಾತ್ರಿಯ ಕರ್ಫ್ಯೂ. ಎಂಟರ ನಂತರ ಮನೆಯಿಂದ ಹೊರಗೆ ಕಂಡವರಿಗೆ ಗುಂಡಿಟ್ಟು ಕೊಲ್ಲುವ ಆಜ್ಞೆ! ಆ ಸಂಜೆಯ ಡೈಯರ್‌ನ ಗುಂಡಿನ ಮಳೆ, ಸಾವಿರ ತೆರೆ ಎಳೆದು ಇಡೀ ಅಮೃತ್‌ಸರ ಭೀತಿಯಿಂದ ಬೆದರಿ ಸೊಲ್ಲಡಗಿ ಕುಳಿದಿದೆ. ಇಂಥಾ ಕ್ಷಣದಲ್ಲಿ ಹೆಣಗಳ ರಾಶಿಯಲ್ಲಿ ಶವಗಳನ್ನು ಅಲುಗಾಡಿಸಿ ತಮ್ಮ ಪತಿಯ ಮುಖಕ್ಕಾಗಿ ಪರದಾಡುತ್ತಿದ್ದಾರೆ ಅತ್ತರ್ ಕೌರ್. ಬದುಕಿರಬಹುದೆ, ಅರೆಕುಟುಕು ಜೀವವಾದರೂ ಉಳಿದಿರಬಹುದೆ, ಎದೆಯಲ್ಲಿ ಅದಮ್ಯ ಆಸೆ.

ಹುಚ್ಚಳಂತೆ ಅತ್ತಿಂದಿತ್ತ ಇತ್ತಿಂದತ್ತ ತಡಕಾಡುತ್ತಿದ್ದಂತೆ ಕತ್ತಲಾಗಿತ್ತು. ಆಗಲೇ ಆ ಖರ್ಜೂರದ ಮರದ ಬಳಿಯ ಮೋಟು ಹಳೆಯ ಗೋಡೆ ಕಾಣಿಸಿತು. ಹತ್ತಿರ ಬಂದವರೇ ಗುರುತಿಸಿದರು. ಸಾವನ್ನಪ್ಪಿದ ಪತಿಯನ್ನು. ತೆರೆದ ಬರಿಗಣ್ಣು, ಎಗರಿ ಹೋದ ಕಿವಿ. ಜೀವ ಹಾರಿ ಹೋದರೂ, ಇನ್ನೂ ಬಿಸಿ ಇದ್ದ ದೇಹ. ಮಡಿಲಿಗೆ ಎಳೆದುಕೊಳ್ಳುತ್ತಿದ್ದಂತೆ, ಸೀರೆ, ಸೆರಗು, ತೋಳುಗಳೆಲ್ಲ ರಕ್ತದಿಂದ ತೋಯ್ದುವು. ಗಂಡನ ದೇಹದ ಮೇಲೆ ಅದೆಷ್ಟು ಗುಂಡಿನ ಗುರುತುಗಳು! ನೇರ ಎದೆ ಸೀಳಿದ ಗುಂಡೊಂದು. ಚಿಟ್ಟನೆ ಚೀರಿದರು. ಕೊಂಚ ದೂರದಲ್ಲಿ ಗಾಯಾಳುಗಳಿಗೆ ನೀರು ಕುಡಿಸುತ್ತಿದ್ದ ಓರ್ವ ಎತ್ತರದ ಸರದಾರ್‌ಜಿ ಯುವಕ ಚೀರಿದ್ದು ಕೇಳಿ ಓಡಿ ಬಂದ. ಪತಿಯ ರಕ್ತಸಿಕ್ತ ಶವವನ್ನು ತೊಡೆಯ ಮೇಲಿಟ್ಟು ರೋಧಿಸುತ್ತಿದ್ದ ಹೆಣ್ಣುಮಗಳ ಆಕ್ರಂದನ ಈ ಕುದಿವ ರಕ್ತದ ಇಪ್ಪತ್ತು ವಯಸ್ಸಿನ ಹುಡುಗನ ಎದೆ ಸೀಳಿತು. ಬಗ್ಗಿ ಕುಸಿದವನ ಕಣ್ಣಲ್ಲಿ ಕಿಡಿ. 'ಬೆಹನ್ ಇದರ ಸೇಡು ನಾ ಖಂಡಿತಾ ತೀರಿಸಿಕೊಳ್ಳುತ್ತೇನೆ' ಆತನ ಪ್ರತಿಜ್ಞೆ. ಆ ಕ್ಷಣ ತನ್ನೆದುರು ನಿಂತ ತರುಣ, ಮುಂದೆ ಇಪ್ಪತ್ತೊಂದು ವರ್ಷಗಳ ಕಾಲ ಆ ದೃಶ್ಯವನ್ನು, ಜಲಿನ್‌ವಾಲಾ ಬಾಗ್ ಹತ್ಯಾಕಾಂಡ ವನ್ನು ತನ್ನೆದೆಯಲ್ಲಿ ಹೊತ್ತು, ಕಡೆಗೊಂದು ದಿನ ಲಂಡನ್ ತಲುಪಿ ಸರ್ ಮೈಕೇಲ್ ಓ'ಡೈಯರ್‌ನನ್ನು ಬಲಿ ತೆಗೆದುಕೊಳ್ಳುತ್ತಾನೆಂದು ಆ ತಾಯಿಗೂ ಅಂದು ತಿಳಿದಿರಲಿಲ್ಲ. ಅತ್ತರ್ ಕೌರ್ ಎಲ್ಲಿಂದಲೋ ಒಂದು 'ಚಾರ್‌ಪಾಯಿ' ತಂದರು. ಇಬ್ಬರೂ ಸೇರಿ ಪತಿಯ ಶವವನ್ನು ಹೊತ್ತು ಅದರ ಮೇಲೆ ಮಲಗಿಸಿ, ಮನೆಗೆ ಹೊತ್ತು ನಡೆದರು. ಒಂದು ಭುಜ ಆತನದು, ಉದ್ದಾಮ್ ಸಿಂಗ್‌ದು. ಪತಿಯ ಹೆಣಕ್ಕೆ ಮತ್ತೊಂದು ಹೆಗಲು ಗರ್ಭಿಣಿ ಅತ್ತರ್ ಕೌರ್‌ದು. ಆಕೆಯ ಗರ್ಭದಲ್ಲಿದ್ದ ಬಾಲಕನಿಗೆ ತಂದೆಯನ್ನು ನೋಡುವ ಭಾಗ್ಯವೇ ಇರಲಿಲ್ಲ.

ಪತಿಯ ಮರಣದೊಂದಿಗೆ ಸೌದೆ ವ್ಯಾಪಾರ ಮುಚ್ಚಿ ಹೋಯಿತು. ಸ್ಥಿತಿವಂತ ಕುಟುಂಬ ದಾರಿದ್ರ್ಯದ ಅಂಚಿಗೆ ತಳ್ಳಿ ನಿಂತಿತು. 20, ನವೆಂಬರ್ 1919, ಸೋಹನ್ ಲಾಲ್ ಜನಿಸಿದರು. ಪುತ್ರವಿಯೋಗ ದಲ್ಲಿ ಸದಾ ಅಳುತ್ತಿದ್ದ ಅತ್ತೆ, ಶೀಘ್ರದಲ್ಲೇ ಸ್ವರ್ಗಸ್ಥಳಾದಳು. ಮೂರು ಸಣ್ಣ ಮಕ್ಕಳ ಭಾರವನ್ನು ಹೆಗಲಲ್ಲಿ ಹೊತ್ತು, ಏಕಾಂಗಿಯಾಗಿ ಅತ್ತರ್ ಕೌರ್ ಬದುಕಿನ ಹೋರಾಟಕ್ಕೆ ಸನ್ನದ್ಧರಾದರು.

ಬಡತನದಲ್ಲಿ ಬೆಂದ ಈ ದಿನಗಳಲ್ಲೇ ಪ್ಲೇಗ್‌ನ ಮಹಾಮಾರಿ ಆವರಿಸಿತ್ತು. ಮನೆಗೆ ಬಂದ 'ಹೆಲ್ತ್ ಆಫೀಸರ್'ನಿಂದ ಔಷಧಿ ತೆಗೆದುಕೊಳ್ಳಲು ನಿರಾಕರಿಸಿ, ಎಕ್ಕದ ಎಲೆಯಲ್ಲಿ ತುಪ್ಪ ಮತ್ತು ಕರಿ ಮೆಣಸಿನ ಎಂಥದ್ದೋ ನಾಟಿ ಔಷಧಿ ತಯಾರಿಸಿ ಮಕ್ಕಳಿಗೆ ತಿನಿಸಿದರು, ತಾವೂ ಅದನ್ನೇ ತಿಂದರು. ಅತ್ತರ್ ಕೌರ್ ಬ್ರಿಟಿಷ್‌ಸರಕಾರದ ರೂಪಾಯಿ ಇರಲಿ, ಔಷಧಿಯನ್ನೂ ಮುಟ್ಟ ಬಯಸಲಿಲ್ಲ. ಸರಕಾರದ ಪರಿಹಾರ ಧನವನ್ನು ಬಹುಶಃ ಪ್ರತಿಯೊಬ್ಬರೂ ಸ್ವೀಕರಿಸಿದ್ದರು. 'ನಮಗೆ ಬೇಕಾದದ್ದು ಪರಿಹಾರವಲ್ಲ, ಸ್ವಾತಂತ್ರ್ಯ. ನಮ್ಮ ಪತಿಯ ರಕ್ತಕ್ಕೆ ಪರಿಹಾರವಾಗಿ ಹಣ ಪಡೆಯುವುದಿಲ್ಲ' ಎಂದು ತಿರಸ್ಕರಿಸಿದ ವ್ಯಕ್ತಿಗಳು ಇಬ್ಬರೇ ಇಬ್ಬರು - ತಾಯಿ ಅತ್ತರ್ ಕೌರ್ ಮತ್ತು ರತನ್ ದೇವಿ. ಜಲಿಯನ್‌ವಾಲಾ ಬಾಗ್ ದುರಂತದ ಆ ರಾತ್ರಿ, ರತನ್ ದೇವಿಗೆ ಪತಿಯ ಹೆಣ ಸಿಕ್ಕಿದಾಗ, ಅದನ್ನು ಹೊತ್ತು ಮನೆಗೆ ತರಲು ಅಲ್ಲಿ ಯಾರೂ ಇರಲಿಲ್ಲ. ಸಾಯುವವರ ನೋಯುವವರ ಆಕ್ರಂದನದ ನಡುವೆ ಸಾವಿರಾರು ಹೆಣಗಳ ಮಧ್ಯದಲ್ಲಿ ಅಸಹಾಯಕಳಾಗಿ ಪತಿಯ ಹೆಣವನ್ನು ಬಗಲಲ್ಲಿಟ್ಟುಕೊಂಡು ಇಡೀ ರಾತ್ರಿಯನ್ನು ಜಲಿಯನ್‌ವಾಲಾ ಬಾಗ್‌ನಲ್ಲಿ ಕಳೆದ ಮಹಿಳೆ, ರತನ್‌ದೇವಿ.

ಸರಕಾರಿ ಅಧಿಕಾರಿಗಳು ಸಾಕಷ್ಟು ಬಾರಿ ಅತ್ತರ್ ಕೌರ್ ಮನೆಗೆ ಬಂದು 'ಮಕ್ಕಳ ಭವಿಷ್ಯಕ್ಕಾದರೂ ಪರಿಹಾರ ಧನವನ್ನು ತೆಗೆದುಕೊಳ್ಳಿ' ಎಂದು ಹೇಳುತ್ತಿದ್ದರು. ಅತ್ತರ್ ಕೌರ್‌ದು ಒಂದೇ ಉತ್ತರ 'ಭಾರತೀಯ ನಾರಿಗೆ ಪತಿ ಭಗವಂತನ ಸ್ವರೂಪ. ಹಣಕ್ಕಾಗಿ ನನ್ನ ದೇವರನ್ನು ನಾ ಮಾರುವುದಿಲ್ಲ. ನನ್ನ ಮಕ್ಕಳು ಹಸಿವಿನಿಂದ ಒದ್ದಾಡುವುದನ್ನಾದರೂ ನೋಡುತ್ತೇನೆ, ನನ್ನ ಪತಿಯ ರಕ್ತದ ಬೆಲೆ ಪಡೆದು, ಆ ಹಣದಲ್ಲಿ ಮಕ್ಕಳನ್ನು ಸಾಕಲಾರೆ.'

ಇದೀಗ ಮೂರು ಮಕ್ಕಳ ಸಂಸಾರದ ಪೂರ್ಣ ಹೊಣೆ ಅತ್ತರ್ ಕೌರ್ ಮೇಲಿತ್ತು. ಆ ದಿನಗಳಲ್ಲಿ ಅತ್ತರ್ ಕೌರ್ ಖರ್ಬೂಜದ ಬೀಜ ತೆಗೆಯುವ ಕೆಲಸ, ಪೆಪ್ಪರಮಿಂಟ್‌ಗೆ ಲೇಬಲ್ ಮೆತ್ತುವ ಕೆಲಸ, ಹೀಗೆ ಏನೇನೋ ಸಣ್ಣ ಪುಟ್ಟ ಕೆಲಸಗಳನ್ನು ಮಾಡಿ ಸಂಸಾರ ನಡೆಸಿದ್ದರು. ಮಕ್ಕಳೂ ಒಂದಿಲ್ಲೊಂದು ಕೆಲಸಕ್ಕೆ ಕೈ ಹಾಕುವ ಅನಿವಾರ್ಯವಿತ್ತು. ಅರೆ ಹೊಟ್ಟೆಯ ದಿನಗಳು ಅಭ್ಯಾಸವಾಗಿದ್ದವು. ಎಷ್ಟೋ ಬಾರಿ ಒಂದಿಷ್ಟು ಹುರಿದ ಕಡಲೆ ಕಾಳು ತಿಂದು ಮಲಗಿದ ದಿನಗಳಿದ್ದವು. ಶಾಲೆಗೆ ಹೋಗುವ ಸೋಹನ್ ಲಾಲ್ ಭಾರತಿಯ ಆಸೆ ಈ ಆರ್ಥಿಕ ಮುಗ್ಗಟ್ಟಿನಲ್ಲಿ ಹೊಸಕಿ ಹೋಯಿತು. ಗಂಡು ಮಕ್ಕಳಿಬ್ಬರೂ ಎಳೆಯ ವಯಸ್ಸಿನಲ್ಲೇ ಪರರವರ ಅಂಗಡಿಗಳಲ್ಲಿ ಕೆಲಸಕ್ಕೆ ನಿಂತರು.

ಬಾಲಕ ಸೋಹನ್ ಲಾಲ್ ಬೆಳೆದಂತೆ ತಾಯಿಯೊಡನೆ ಅನೇಕ ಬಾರಿ 'ನೌಜವಾನ್ ಸಭೆ'ಗಳಿಗೆ ಹೋದರು. ಅಲ್ಲಿ ಅತ್ತರ್ ಕೌರ್ ಯುವಕರಿಗೆ 'ದೇಶಕ್ಕಾಗಿ ಹೋರಾಡಿ ಮಡಿವ' ಕರೆ ನೀಡುತ್ತಿದ್ದುದು ಇವರನ್ನೂ ಸ್ವಾತಂತ್ರ ಸಂಗ್ರಾಮದಲ್ಲಿ ಭಾಗಿಯಾಗುವಂತೆ ಮಾಡಿತು. ಅತ್ತರ್ ಕೌರ್‌ಗೆ ಗಾಂಧೀಜಿಯವರ ಸತ್ಯಾಗ್ರಹದಲ್ಲಿ ಅಟಲ ವಿಶ್ವಾಸ. 1932ರಲ್ಲಿ ವಿದೇಶೀ ಬಟ್ಟೆ ಮತ್ತು ವಿದೇಶೀ ಹೆಂಡದ ವಿರುದ್ಧ ಪಿಕೆಟಿಂಗ್ ಆರಂಭವಾಗಿತ್ತು. ಅತ್ತರ್ ಕೌರ್ ಸುತ್ತ ಮುತ್ತಲ ಹೆಂಗಸರು ಮಕ್ಕಳನ್ನು ಕೂಡಿಸಿಕೊಂಡು ಅಂಗಡಿಗಳ ಎದುರು ಧರಣಿ ಹೂಡಿದ್ದರು.

ಎಷ್ಟೆಲ್ಲ ಹುತಾತ್ಮರ ಬಲಿದಾನದ ನಂತರ ದೊರೆತಿತ್ತು ಭಾರತಕ್ಕೆ ಸ್ವಾತಂತ್ರ್ಯ. 1952ರಲ್ಲಿ ಭಾರತ ಸರಕಾರ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸ ಬರೆಯಲು ನಿಶ್ಚಯಿಸಿದಾಗ, ಅತ್ತರ್ ಕೌರ್ ಶಿಕ್ಷಣ ಮಂತ್ರಿ ಮೌಲಾನಾ ಆಜಾದ್ ಅವರಿಗೆ ಬರೆದರು 'ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸವನ್ನು ಒಂದು ಕೋಣೆಯಲ್ಲಿ ಕುಳಿತು ಬರೆಯಲಾಗದು. ಭಾರತದ ಇಂಚು ಇಂಚು ನೆಲದಲ್ಲೂ ಸ್ವಾತಂತ್ರ್ಯ ಹೋರಾಟ ನಡೆದಿದೆ. ಆದ್ದರಿಂದಲೇ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದವರ ಕುಟುಂಬಗಳ ಸಂಪರ್ಕದ ಅಗತ್ಯವಿದೆ. ಜಲಿಯನ್‌ವಾಲಾ ಬಾಗ್ ದುರಂತದಲ್ಲಿ ನನ್ನ ಪತಿ ಭಾಗ್‌ಮಲ್ ಭಾಟಿಯಾ ಹುತಾತ್ಮರಾದರು. ಜಲಿಯನ್‌ವಾಲಾ ಬಾಗ್ ಸಂಬಂಧವಾಗಿ ಬಹುಶಃ ನಾ ನಿಮಗೆ ಒಂದಿಷ್ಟು ಮಾಹಿತಿ ನೀಡಬಲ್ಲೆ'. ಮೌಲಾನಾ ಆಜಾದ್, 'ಇತಿಹಾಸ ಕಮಿಟಿ'ಯ ಕಾರ್ಯದರ್ಶಿ ಸುರೇಂದ್ರಮೋಹನ್ ಘೋಷ್ ಅವರನ್ನು ಅತ್ತರ್ ಕೌರ್ ಭೇಟಿಗೆ ಅಮೃತ್‌ಸರಕ್ಕೆ ಕಳುಹಿಸಿದರು. ಜಲಿಯನ್‌ವಾಲಾ ಬಾಗ್ ಕುರಿತಂತೆ ಅತ್ತರ್ ಕೌರ್‌ಗೆ ತಿಳಿದ ಮಾಹಿತಿಗಳನ್ನು ಪಡೆದರು.

1956ರಲ್ಲಿ ಅಮೃತ್‌ಸರಕ್ಕೆ ಬಂದ ಮೌಲಾನಾ ಆಜಾದ್ ಅತ್ತರ್ ಕೌರ್ ಅವರನ್ನು ಭೇಟಿಯಾದರು. ಅವರ ಬಾಯಿಂದ ಜಲಿಯನ್‌ವಾಲಾ ಬಾಗ್ ಪ್ರಕರಣವನ್ನು ಕೇಳುತ್ತಿದ್ದಂತೆ ಮೌಲಾನಾ ಅವರ ಕಣ್ಣುಗಳು ತೇವವಾಗಿದ್ದವು. ಅತ್ತರ್ ಕೌರ್ ಹೊರಟು ನಿಂತಾಗ 'ನಿಮ್ಮ ಇಚ್ಛೆ ಏನಾದರೂ ಇದ್ದರೆ ತಿಳಿಸಿ' ಎಂದು ಹೇಳಿದರು. 'ಯಾವ ಸ್ವಾತಂತ್ರ್ಯಕ್ಕಾಗಿ ಸಾವಿರಾರು ಭಾರತೀಯರು ಬಲಿದಾನ ನೀಡಿ ಹುತಾತ್ಮರಾದರೋ, ಆ ಸ್ವಾತಂತ್ರ್ಯ ಸರಿಯಾದ ಅರ್ಥದಲ್ಲಿ ಪ್ರತಿಯೊಬ್ಬ ಭಾರತೀಯನಿಗೂ ದೊರೆಯಬೇಕು. ಇದೇ ನನ್ನ ಇಚ್ಛೆ' ಅತ್ತರ್ ಕೌರ್ ಉತ್ತರಿಸಿದ್ದರು. ಭಾರತ ಸರಕಾರ ಹುತಾತ್ಮ ಪತಿಯ ಹೆಸರಿನಲ್ಲಿ ನೀಡಲು ಬಂದ 'ಪೆನ್ಷನ್' ಕೂಡಾ ಅತ್ತರ್ ಕೌರ್ ನಿರಾಕರಿಸಿದರು. 'ನನ್ನ ಪತಿಯ ದೇಶಭಕ್ತಿಗೆ ಬೆಲೆ ತೆರಬೇಡಿ' ಎಂದರು. ಅಂದಿನ ಪ್ರಧಾನ ಮಂತ್ರಿ ಜವಾಹರಲಾಲ್ ನೆಹರೂ ಕೂಡಾ ತಾಯಿ ಅತ್ತರ್ ಕೌರ್ ಅವರನ್ನು ನೋಡಬಯಸಿದರು. ಮಕ್ಕಳೊಡನೆ ನೆಹರೂ ಅವರನ್ನು ಭೇಟಿಯಾದಾಗ, ಜೊತೆಗೆ ಇಂದಿರಾ ಇದ್ದರು. ಅತ್ತರ್ ಕೌರ್ ಅವರ ಬಾಯಿಂದ ಜಲಿಯನ್‌ವಾಲಾ ಬಾಗ್ ಪ್ರಕರಣವನ್ನು ಪೂರ್ಣ ಕೇಳಿ ನೊಂದರು. ನೆಹರೂ ಅವರು, 'ನನ್ನಿಂದೇನಾದರೂ ಆಗಬೇಕಿದ್ದರೆ ಹೇಳಿ' ಎಂದು ಕೇಳಿದಾಗ, ಅತ್ತರ್ ಕೌರ್ 'ಹುತಾತ್ಮರಿಗೊಂದು ಸ್ಮಾರಕ ನಿಲ್ಲಿಸಬೇಕೆಂದು' ತಿಳಿಸಿದರು. ನೆಹರೂ ಅವರು ಅತ್ತರ್ ಕೌರ್‌ಗೆ ಪೆನ್ಷನ್ ತೆಗೆದುಕೊಳ್ಳುವಂತೆ, ಹಿಸಾರ್ ಜಿಲ್ಲೆಯಲ್ಲಿ ಜಮೀನು ನೀಡುವುದಾಗಿಯೂ, ಅದನ್ನೂ ತೆಗೆದುಕೊಳ್ಳುವಂತೆ ಪ್ರಾರ್ಥಿಸಿದರು. ಅತ್ತರ್ ಕೌರ್ ಬಹಳಷ್ಟು ಸಹೃದಯತೆಯಿಂದಲೇ ಅದನ್ನು ಸಂಪೂರ್ಣ ನಿರಾಕರಿಸಿದರು. ದೇಶಕ್ಕಾಗಿ ದುಡಿವ, ಮಡಿವ ದೇಶಭಕ್ತಿಗೆ, ಯಾವುದೇ ಬಗೆಯ ಪ್ರತಿಫಲವನ್ನು ಪಡೆಯಲು ಆಕೆ ಸಿದ್ಧವಿರಲಿಲ್ಲ.

ಜಲಿಯನ್‌ವಾಲಾ ಬಾಗ್‌ನಲ್ಲಿ ಕೆಂಪು ಕಲ್ಲಿನ 45 ಅಡಿಯ ಸ್ಮಾರಕ 'ಹುತಾತ್ಮರ ಜ್ಯೋತಿ' ನಿರ್ಮಾಣವಾಯಿತು. 1961ರಲ್ಲಿ ಇದರ ಉದ್ಘಾಟನೆಗೆ ರಾಷ್ಟ್ರಪತಿ ಡಾ॥ ರಾಜೇಂದ್ರ ಪ್ರಸಾದ್ ಅಮೃತ್‌ಸರಕ್ಕೆ ಬಂದರು. ಅವರೂ ಅತ್ತರ್ ಕೌರ್ ಅವರನ್ನು ಭೇಟಿಯಾಗ ಬಯಸಿದರು. ತಮ್ಮ ಇಬ್ಬರೂ ಮಕ್ಕಳೊಡನೆ 'ಸರ್ಕ್ಯೂಟ್ ಹೌಸ್' ತಲುಪಿದಾಗ ರಾಷ್ಟ್ರಪತಿಯವರು ಎದ್ದು ನಿಂತು ತಾಯಿ ಅತ್ತರ್ ಕೌರ್ ಅವರ ಪಾದಕ್ಕೆ ನಮಸ್ಕರಿಸಿದ್ದರು. ಮತ್ತೆ ಹೇಳಿದ್ದರು 'ಭಾಗ್‌ಮಲ್ ಭಾಟಿಯಾ ಜಲಿಯನ್‌ವಾಲಾ ಬಾಗ್‌ನ ಹುತಾತ್ಮರಾದರೆ, ನೀವು ನಿಮ್ಮ ಧೈರ್ಯ, ಬಲಿದಾನದ ಕಾರಣಕ್ಕೆ ಜಲಿಯನ್‌ವಾಲಾ ಬಾಗ್‌ನ ಜ್ಯೋತಿಯಾಗಿದ್ದೀರಿ. ನಿಮ್ಮ ಗರ್ಭದಲ್ಲಿದ್ದ ಈ ಮಗ ಜಲಿಯನ್‌ವಾಲಾ ಬಾಗ್‌ನ ಅಭಿಮನ್ಯು.'

'ದಾಸ್ಯದ ಶ್ರೀಮಂತಿಕೆಗಿಂತ ಸ್ವಾತಂತ್ರ್ಯದ ಬಡತನವಿರಲಿ' ಎಂದು ಆಯ್ದುಕೊಂಡ ಅತ್ತರ್ ಕೌರ್ ತಮ್ಮ ಬದುಕು ಪೂರಾ ತಮ್ಮ ಆದರ್ಶದಂತೆಯೇ ಬದುಕಿದರು. ಅನೇಕ ಸಮಾಜಿಕ ಕಾರ್ಯಗಳಲ್ಲಿ ತೊಡಗಿದ ಅತ್ತರ್ ಕೌರ್ 1964ರಲ್ಲಿ ಚಿರ ನಿದ್ರೆಯಲ್ಲಿ ಮಲಗಿದರು.

ಅಮೃತ್‌ಸರದ ಸಣ್ಣ ಗಲ್ಲಿಯ ಆ ಮನೆಯಲ್ಲಿ ಸೋಹನ್ ಲಾಲ್ ನನ್ನೆದುರು ತಮ್ಮ ತಾಯಿಯ ಕತೆ ಹೇಳುತ್ತಿದ್ದಂತೆ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಪರೋಕ್ಷವಾಗಿ ಭಾಗಿಯಾದ ಅತ್ತರ್ ಕೌರ್ ಅಂಥ ಸಾವಿರಾರು ಮಹಿಳೆಯರ ಚಿತ್ರ ನನ್ನ ಕಣ್ಣೆದುರು ತೆರೆದುಕೊಂಡಿತು.

ಸ್ವತಃ ವಿದ್ಯಾಭ್ಯಾಸದ ಅವಕಾಶವಿಲ್ಲದೆ, ಕಡು ಬಡತನದಲ್ಲಿ ಬಾಲ್ಯವನ್ನೆಲ್ಲ ಕಳೆದು ಇಂದು ಒಂದು ಸಣ್ಣ ಎಲೆಕ್ಟ್ರಿಕಲ್ ಅಂಗಡಿ ಇಟ್ಟುಕೊಂಡು ಈಗಲೂ ದುಡಿಯುತ್ತಿರುವ ಆ ವೀರಮಾತೆಯ ಮಗ ಸೋಹನ್ ಲಾಲ್ ಭಾರತಿ, ತಮ್ಮ ತಾಯಿಯ ಆದರ್ಶವನ್ನೇ ಪಾಲಿಸಿದವರು. ಸ್ವತಃ ಸ್ವಾತಂತ್ರ್ಯ ಯೋಧರಾದರೂ ಅದರ ಯಾವ ಲಾಭವನ್ನೂ ಪಡೆಯಲಿಲ್ಲ. ಜಲಿಯನ್‌ವಾಲಾ ಬಾಗ್ ಕುರಿತು, ತಾಯಿಯನ್ನು ಕುರಿತು ಅತ್ಯಂತ ಭಾವುಕರಾಗುವ, ಅತ್ಯಂತ ಆಸ್ಥೆಯಿಂದ ತಾಯಿಯ ಮಾತುಗಳನ್ನು ನೆನಪು ಮಾಡಿಕೊಂಡು ಹೇಳುವ ಸೋಹನ್ ಲಾಲ್ ಭಾರತಿಯವರೊಡನೆ, ಅವರ ತಂದೆ ಹುತಾತ್ಮ ಭಾಗಮಲ್ ಭಾಟಿಯಾ ಹೆಸರಿನ ರಸ್ತೆಯ ಮೂಲಕ ಹಾಯ್ದು ಬಾಗ್‌ಗೆ ಬಂದಾಗ, ಜಲಿಯನ್‌ವಾಲಾ ಬಾಗ್ ಮತ್ತೊಮ್ಮೆ ಜೀವ ಪಡೆದಿತ್ತು. ಅತ್ತರ್ ಕೌರ್ ಪತಿಯ ಹೆಣವನ್ನು ಕಂಡ ಆ ಖರ್ಜೂರದ ಮರದ ಬಳಿಗೆ ಕರೆದೊಯ್ದರು. ಅವರು ಬರೆದಿದ್ದ 'ಜಲಿಯನ್‌ವಾಲಾ ಬಾಗ್ ಕೀ ಖೂನಿ ಧರತೀ ಔರ್ ಮೇರೆ ಮಾತಾ-ಪಿತಾ' ಪುಸ್ತಕಕ್ಕೆ ಸಹಿ ಹಾಕಿ ನನ್ನ ಕೈಗಿಟ್ಟರು.

ಇಂದು ಅಮೃತ್‌ಸರದ ಮುಖ್ಯ ರಸ್ತೆಯೊಂದು 'ಅತ್ತರ್ ಕೌರ್' ಹೆಸರು ಹೊತ್ತಿದೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ನೇರವಾಗಿ ಧುಮುಕಿ ಹುತಾತ್ಮರಾದ ಸಾವಿರಾರು ಜನರಂತೆ, ಇತಿಹಾಸದ ಪುಟಗಳಲ್ಲಿ ಅದೃಶ್ಯರಾಗಿ, ಎಲ್ಲಿಯೂ ದಾಖಲಾಗದಿದ್ದರೂ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗಂಡ ಮಕ್ಕಳನ್ನು ಬಲಿಕೊಟ್ಟು ದಿಟ್ಟವಾಗಿ ಸ್ವಾಭಿಮಾನದಿಂದ ಬದುಕಿ, ಸ್ವಾತಂತ್ರ್ಯದ ಕನಸು ಕಂಡ ಅತ್ತರ್ ಕೌರ್ ಅಂಥಾ ಸಾವಿರಾರು ಮಹಿಳೆಯರಿದ್ದಾರೆ. ಇವರೆಲ್ಲರ ತ್ಯಾಗದ ಬಲಿದಾನದ ಬುನಾದಿಯ ಮೇಲೆ ನಿಂತಿದೆ. ನಮ್ಮ ಇಂದಿನ ಸುವರ್ಣ ಸ್ವಾತಂತ್ರ್ಯ.

## ಸ್ವಾತಂತ್ರ್ಯ : ಮಹಿಳೆಯರ ಚಿಂತನೆಯಲ್ಲಿ

"ಉಚ್ಚಶಿಕ್ಷಣ-ರಾಜಕೀಯ ಕ್ಷೇತ್ರಗಳಲ್ಲಿ ಹೀಗೆ ಕೆಲವು ಸೌಕರ್ಯಗಳು ದೊರೆತಿದ್ದರೂ, ಭಾರತೀಯ ಸ್ತ್ರೀ ಸಮುದಾಯದ ಸಾರ್ವತ್ರಿಕ ಉನ್ನತಿಯ ಪ್ರಶ್ನೆಯ ಅಂಚನ್ನು ಮಾತ್ರ ಮುಟ್ಟಿದಂತಿದೆ. ಕಾಯದೆ ಮಂಡಲಗಳಲ್ಲಿ ಕೆಲವು ಹೆಣ್ಣು ಮಕ್ಕಳು ಕುಳಿತುಕೊಳ್ಳುವುದರಿಂದ ಕೆಲವು ಸಾವಿರ ಮಹಿಳೆಯರು ಪದವೀಧರರಾಗುವುದರಿಂದ, ನೂರಕ್ಕೆ ಮೂರರಷ್ಟು ಸಾಕ್ಷರರಾಗುವುದರಿಂದ ಈ ಚಳವಳಿಯ ಧ್ಯೇಯ ಪೂರ್ತಿಯಾಯಿತೆಂದು ಯಾರೂ ಹೇಳಲಾರರು. ಅಜ್ಞಾನಾಂಧಕಾರದಲ್ಲಿ ಮುಳುಗಿದ ೯೭% ಸ್ತ್ರೀಯರ ಮತ್ತು ಹೊಲ-ಕಾರ್ಖಾನೆಗಳಲ್ಲಿ ದುಡಿಯುವ ೯೦% ಸ್ತ್ರೀಯರ ಉನ್ನತಿಯಾದಾಗಲೇ ಈ ಪ್ರಶ್ನೆಯು ಬಿಡುವದು. ಆದುದರಿಂದ ಹೆಚ್ಚು ಭಾಗ್ಯಶಾಲಿಗಳಾದವರು ಶಿಕ್ಷಣ-ಸಂಪತ್ತು ಇತ್ಯಾದಿ ಕಾರಣಗಳಿಂದ ಹೆಚ್ಚಿನ ಸಂಖ್ಯೆ ಸೌಕರ್ಯಗಳನ್ನು ಅನುಭವಿಸುವವರು ತಮ್ಮ ನಿರ್ಭಾಗ್ಯ ಭಗಿನಿಯರ ಸೇವೆಗಾಗಿ ಮುಂದಕ್ಕೆ ಬರುವುದು ಅಗತ್ಯವಿದೆ. ಪ್ರೌಢ ಶಿಕ್ಷಣ ಆರೋಗ್ಯ ಪ್ರಚಾರ ಶಾಲೆಗಳಲ್ಲಿಯ ಶಿಕ್ಷಣದಲ್ಲಿ ಕಂಡು ಬರುವ ಕೊಳೆ ಹಾಳುಗಳ ಪ್ರತಿಬಂಧ, ಸಾಮಾಜಿಕ ಸುಧಾರಣೆಗಳಿಗೆ ಅನುಕೂಲ ವಾತಾವರಣದ ನಿರ್ಮಾಣ, ದುಃಖ-ದಾರಿದ್ರ್ಯಗಳ ನಿವಾರಣೆ - ಇವೇ ಮೊದಲಾದ ವಿವಿಧ ಕ್ಷೇತ್ರಗಳಲ್ಲಿ ಆತ್ಮ ಸಂತೋಷದಿಂದ ಕೆಲಸ ಮಾಡಲು ಸಿದ್ಧರಾಗಿದ್ದ ಕಾರ್ಯಕರ್ತ್ರಿಯರ ಪ್ರಚಂಡ ಪಡೆಯು ನಮಗೆ ಬೇಕಾಗಿದೆ. ಉಪಕಾರದ ಭಾವನೆಯಿಂದಲ್ಲ, 'ಸಾಮಾಜಿಕ ಕಾರ್ಯಕರ್ತ್ರಿ' ಎಂಬ ಅಲಂಕಾರದ ಹೆಸರನ್ನು ಪಡೆಯುವ ಸಲುವಾಗಿಯಲ್ಲ - ಅಂತಃಕರಣದ ಆಸ್ಥೆಯಿಂದ ಈ ಕೆಲಸವನ್ನು ಕೈಕೊಳ್ಳುವವರು ಬೇಕು.

ಸುಲ್ತಾನಾ ಮೀರ ಅಮಿರುದ್ದೀನ "ರೋಶನೀ" (ಅಖಿಲ ಭಾರತ ಮಹಿಳಾ ಪರಿಷತ್ತಿನ ಮುಖವಾಣಿ ಪತ್ರಿಕೆ)
(- ಸಂಗ್ರಹ : ಶ್ಯಾಮಲಾದೇವಿ ಬೆಳಗಾಂವಕರ)

# ಸ್ವಾತಂತ್ರ್ಯ ಹೋರಾಟ ಮತ್ತು ಮಹಿಳೆ




ಸ್ವಾತಂತ್ರ್ಯ-50ರ ನೆನಪಿಗೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಹಿಳೆ - ಒಂದು ಸಂವಾದವನ್ನು ಜಾಗೃತಿ ಮಹಿಳಾ ಅಧ್ಯಯನ ಕೇಂದ್ರವು ನವ ಕರ್ನಾಟಕ ಪ್ರಕಾಶನ ಸಂಸ್ಥೆಯೊಂದಿಗೆ ಇತ್ತೀಚೆಗೆ ಏರ್ಪಡಿಸಿತ್ತು. ಈ ಸಂದರ್ಭದಲ್ಲಿ ಅಚಲದ ಸ್ವಾತಂತ್ರ್ಯ ವಿಶೇಷ ಸಂಚಿಕೆಯನ್ನು ಖ್ಯಾತ ಸಾಹಿತಿ ಶ್ರೀ ವ್ಯಾಸರಾಯಬಲ್ಲಾಳರು ಬಿಡುಗಡೆ ಮಾಡಿದರು.

ಸಭೆಯನ್ನುದ್ದೇಶಿಸಿ ಮಾತನಾಡಿದ ಹಿರಿಯ ಗಾಂಧಿವಾದಿ ಶ್ರೀಮತಿ ಮಹಾದೇವಿ ತಾಯಿಯವರು ತಮ್ಮ ಹೋರಾಟದ ಅನುಭವಗಳನ್ನು ಸಭಿಕರೊಂದಿಗೆ ಹಂಚಿಕೊಂಡರು. ಇಂದು ಮಾನವೀಯತೆಯೊಳನ್ನೊಳಗೊಂಡ ಸಂಸ್ಕೃತಿಯು ನಶಿಸುತ್ತಿರುವುದಕ್ಕೆ ಖೇದ ವ್ಯಕ್ತಪಡಿಸಿದ ಮಹಾದೇವಿ ತಾಯಿಯವರು, ಉತ್ತಮ ಮೌಲ್ಯಗಳು ಪುನರುಜ್ಜೀವಗೊಳ್ಳುವವರೆಗೆ ನಾವು ಹೋರಾಡಿ ಪಡೆದ ಸ್ವಾತಂತ್ರ್ಯಕ್ಕೆ ಅರ್ಥವಿಲ್ಲ ಎಂದು ಅಭಿಪ್ರಾಯ ಪಟ್ಟರು.

ಮತ್ತೊಬ್ಬ ಹಿರಿಯ ಗಾಂಧಿವಾದಿಯಾದ ಶ್ರೀ ಹೆಚ್.ಎಸ್. ದೊರೆಸ್ವಾಮಿಯವರು ಬ್ರಿಟಿಷರನ್ನು ಹೋರಾಟದಿಂದ ಓಡಿಸಿದ ನಾವು ಇಂದು ಬಹುರಾಷ್ಟ್ರೀಯ ಕಂಪೆನಿಗಳಿಗೆ ಆಹ್ವಾನ ನೀಡಿದ್ದೇವೆ. ಭಾರತವನ್ನು ಆವರಿಸಿರುವ ಈ ದಾಸ್ಯದ ವಿರುದ್ಧದ ಹೋರಾಟ ಇಂದಿನ ಮುಖ್ಯ ಸವಾಲಾಗಿದೆ, ಎಂದು ಅಭಿಪ್ರಾಯಪಟ್ಟು ಶ್ರೀಯುತ ದೊರೆಸ್ವಾಮಿಯವರು ಅಂದು ಹೋರಾಟದಲ್ಲಿ ಭಾಗಿಯಾದ ಮಹಿಳೆಯರ ಸಾಧನೆಗಳನ್ನು ಗುರುತಿಸಿದರು.

ಸ್ವಾತಂತ್ರ್ಯ ಹೋರಾಟದ ಕಾಲದಿಂದ ಇಂದಿನವರೆಗೂ ಸಾರ್ವಜನಿಕ ಜೀವನದಲ್ಲಿ ಕ್ರಿಯಾಶೀಲವಾಗಿರುವ ಶ್ರೀಯುತ ಎಂ.ಎ. ಸೇತುರಾವ್‌ರವರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾಗಿದ್ದ ಸ್ತ್ರೀಯರ ಹೋರಾಟದ ವಿವಿಧ ಸ್ವರೂಪಗಳನ್ನು ತಮ್ಮ ಅನುಭವದ ನೆಲೆಯಿಂದ ಗುರುತಿಸಿದರು.

ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಹೋರಾಟದಲ್ಲಿ ಭಾಗವಹಿಸಿರದಿದ್ದರೂ ಬಾಲಕಿಯಾಗಿದ್ದಾಗಿನಿಂದಲೂ ಗಾಂಧಿ ಆದರ್ಶದಿಂದ ಸ್ಫೂರ್ತಿಗೊಂಡು ನಂತರ ಸ್ವಾತಂತ್ರ್ಯಾನಂತರವೂ ಶ್ರೀಮತಿ ಎಸ್.ಜಿ. ಸುಶೀಲಮ್ಮನವರು ಇಂದಿನ ಹೋರಾಟದ ಅಗತ್ಯತೆ ಮತ್ತು ಸ್ವರೂಪಗಳನ್ನು ಕುರಿತಂತೆ ಚರ್ಚಿಸಿದರು.

ಸಭೆಯ ಕೊನೆಯಲ್ಲಿ ಆಗ ಭಾರತಕ್ಕೆ ಭೇಟಿ ನೀಡಲಿದ್ದ ಎಲಿಜಬೆತ್ ರಾಣಿಯ ಸಂದರ್ಭವನ್ನು ಕುರಿತಂತೆ ಒಂದು ನಿರ್ಣಯವನ್ನು ಚರ್ಚೆಯ ನಂತರ ತೆಗೆದುಕೊಳ್ಳಲಾಯಿತು:

"ನಮ್ಮ ದೇಶವು ಸ್ವಾತಂತ್ರ್ಯ ಸುವರ್ಣೋತ್ಸವವನ್ನು ಆಚರಿಸುತ್ತಿರುವ ಈ ಸಂದರ್ಭದಲ್ಲಿ ನಮ್ಮ ದೇಶದ ದಾಸ್ಯಕ್ಕೆ ಕಾರಣವಾದ ಸಾಮ್ರಾಜ್ಯಶಾಹಿಯ ಪ್ರತೀಕವಾದ ರಾಣಿ ಎಲಿಜಬೆತ್‌ಳನ್ನು ನಮ್ಮ ದೇಶದ ಸರ್ಕಾರಿ ಅತಿಥಿಯಾಗಿ ಪರಿಗಣಿಸಿರುವುದನ್ನು ಈ ಸಭೆ ಪ್ರತಿಭಟಿಸುತ್ತದೆ. ಆಕೆಯು ಜಲಿಯನ್‌ವಾಲಾಬಾಗಿಗೆ 'ಭೇಟಿಯಿತ್ತು' ಪುಷ್ಪಗುಚ್ಛವನ್ನಿರಿಸುವುದು ಕೇವಲ ಅಪ್ರಾಸಂಗಿಕ ಮತ್ತು ಔಪಚಾರಿಕವೆಂದು ತೋರುತ್ತಿದೆ. ನಮ್ಮ ಹುತಾತ್ಮರಿಗೆ ಈ ಕೃತ್ರಿಮ ಗೌರವ ತೋರಿಸುವ ಪ್ರಸಂಗವನ್ನು ಈ ಸಭೆಯು ವ್ಯಥೆಯಿಂದ ಗಮನಿಸುತ್ತದೆ. ಮತ್ತು ಈ ರೀತಿಯ ಸನ್ನಿವೇಶಕ್ಕೆ ಕಾರಣರಾದವರನ್ನು ಈ ಸಭೆಯು ತೀವ್ರವಾಗಿ ಖಂಡಿಸುತ್ತದೆ."

# ಕ್ರಾಂತಿಯ ಒಂದು ಕಿಡಿ - ಅಲಿಡಾ ಗೆವಾರ

ನವೆಂಬರ್ 1ನೇ ತಾರೀಖು, ಸೆಂಟ್ರಲ್ ಕಾಲೇಜಿನ ಸೆನೆಟ್ ಹಾಲ್ ತುಂಬಿ ತುಳುಕಿತ್ತು, ಒಂದು ಇಂಚು ಜಾಗವೂ ಬಿಡದಂತೆ ಕೂತ, ನಿಂತ ಜನ. ದೇಶದಾದ್ಯಂತ, ಜಗತ್ತಿನಾದ್ಯಂತ ನಡೆಯುತ್ತಿರುವ ಚೆ ಗೆವಾರ ಹುತಾತ್ಮರಾದ 30ನೇ ವರ್ಷದ ಸಂದರ್ಭದಲ್ಲಿ, ಚೆ ಅವರ ಪುತ್ರಿ ಡಾ॥ ಅಲಿಡಾ ಗೆವಾರ ಬೆಂಗಳೂರಿಗೆ ಆಗಮಿಸಿದ್ದರು. 'ಕ್ಯೂಬಾದ ಹೋರಾಟ ನಮ್ಮ ಹೋರಾಟ' ಎಂದು ಜಗತ್ತಿನ ಶೋಷಿತ ಜನತೆಯೆಲ್ಲವೂ ಗುರುತಿಸಿಕೊಳ್ಳುತ್ತಿರುವ, 'ಸಮಾಜವಾದ ಇಲ್ಲವೇ ಸಾವು' ಎಂದು ಪಸಾಹತುಶಾಹಿ ವಿರುದ್ಧ ಹೋರಾಟಕ್ಕೆ ಬೆಂಬಲ ಸೂಚಿಸುತ್ತಿರುವ ಸಮಯ. ಕ್ಯೂಬಾ ಸೌಹಾರ್ದತಾ ಸಮಿತಿ ಏರ್ಪಡಿಸಿದ ಈ ಕಾರ್ಯಕ್ರಮದಲ್ಲಿ ಅಸಂಖ್ಯ ಸಂಘಟನೆಗಳು ಅಲಿಡಾ ಅವರಿಗೆ ಕ್ರಾಂತಿಕಾರಿ ಸ್ವಾಗತ ಕೋರಿದವು.

'ಕ್ರಾಂತಿಗಾಗಿ ಹೆಂಡತಿಯನ್ನು, ನಾಲ್ಕು ಎಳೆಯ ಮಕ್ಕಳನ್ನು ಬಿಟ್ಟು ಹೋದ ನಿಮ್ಮ ತಂದೆ ಚೆ ಅವರ ವರ್ತನೆ ತುಂಬಾ ಕ್ರೌರ್ಯದ್ದು ಎಂದು ನಿಮಗನಿಸುವುದಿಲ್ಲವೆ?' ಹಾಗೆಂದು ಅಲಿಡಾ ಅವರನ್ನು ಒಂದೊಮ್ಮೆ ಪತ್ರಕರ್ತರೊಬ್ಬರು ಕೇಳಿದಾಗ, 'ಇಲ್ಲ, ಸಾಮಾಜಿಕ್ಕಾಗಿ, ಕ್ರಾಂತಿಗಾಗಿ ಅರ್ಪಿತವಾದ ಅವರ ಬದುಕು ಜನರಿಗೆ ಸೇರಿದ್ದಾಗಿತ್ತು. ಜನರತ್ತಲ ನಿಷ್ಠೆ ಅವರ ಮೊದಲ ಆದ್ಯತೆ ಆಗಿತ್ತು, ನಾವು, ಕುಟುಂಬ ಎರಡನೆಯದು. ನನಗಿರುವ ಒಂದೇ ಪಶ್ಚಾತ್ತಾಪವೆಂದರೆ, ನನ್ನ ತಂದೆಯ ಹೋರಾಟದಲ್ಲಿ ಸೇರುವಷ್ಟು ನಾನು ಆಗ ದೊಡ್ಡವಳಿರಲಿಲ್ಲ ಎಂಬುದು ಮಾತ್ರ' ಎಂದು ಉತ್ತರಿಸಿದ ಅಲಿಡಾ, ಚೆ ಹೊತ್ತಿಸಿದ ಕ್ರಾಂತಿಯ ಕಿಡಿ ಆರದೆ ಹೊಸ ಪೀಳಿಗೆಯಲ್ಲಿ ಹರಿದು ಬಂದ ಪ್ರತೀಕವಾಗಿದ್ದಾರೆ.

ಡಾ॥ ಅಲಿಡಾ ವೃತ್ತಿಯಿಂದ ಶಿಶು ವೈದ್ಯೆ. ಹವಾನಾದ 'ನ್ಯಾಷನಲ್ ಚಿಲ್ಡ್ರನ್ಸ್ ಹಾಸ್ಪಿಟಲ್'ನಲ್ಲಿ ಕೆಲಸ. ಚೆ ಅವರ ವಿಚಾರಗಳನ್ನು, ಸಂದೇಶವನ್ನು ಸಾರಲು ಅವರು ಈ ಯಾತ್ರೆ ಕೈಗೊಂಡಿದ್ದರು. ಸೆನೇಟ್ ಹಾಲ್‌ನಲ್ಲಿ ಕಿಕ್ಕಿರಿದ ಜನ ಅವರನ್ನು ಹೂವಿನ ಹಾರಗಳಲ್ಲಿ ಮುಳುಗಿಸಿ, ಶಾಲುಗಳನ್ನು ಹೊದ್ದಿಸಿ, ತಮ್ಮ ಪ್ರೀತಿಯನ್ನು ಅಭಿವ್ಯಕ್ತಿಸಿದರು. ಇಷ್ಟು ಜನರಸ್ನೇಹದಲ್ಲಿ ಮಿಂದು ಅಲಿಡಾ ಮಾತನಾಡಿದರು.

'ಈ ಪುಷ್ಪವೃಷ್ಟಿ ನೋಡಿ ಮತ್ತೊಮ್ಮೆ ನನಗೆ ಅಚ್ಚರಿಯಾಗುತ್ತಿದೆ. ನನಗೆ ಹೂಮಳೆ ಪ್ರೀತಿ, ವಾತ್ಸಲ್ಯದ ಸಂಕೇತ. ನಿಮಗೆ ಧನ್ಯವಾದವನ್ನು ಹೇಳಲು ನನ್ನಲ್ಲಿ ಪದಗಳಿಲ್ಲ. ಅಮೆರಿಕೆ ಕ್ಯೂಬಾಕ್ಕೆ ನಿರ್ಬಂಧನೆ ಹೇರಿರುವ ಈ ಸಮಯದಲ್ಲಿ, ಕ್ಯೂಬಾದೊಡನೆ ಐಕಮತ್ಯ ತೋರಿಸುವುದು ಬಹಳ ಮುಖ್ಯವಾಗಿದೆ. ಮತ್ತೊಮ್ಮೆ ನನ್ನ ಧನ್ಯವಾದಗಳು.

'ನನ್ನ ತಂದೆ ಅರ್ಜೆಂಟೈನಾದಲ್ಲಿ ಜನಿಸಿದರು. ಮಗುವಾದಾಗಲೇ ಅವರನ್ನು ಉಬ್ಬಸ ಕಾಡಿತು. ಆದರೂ ನನ್ನ ತಂದೆ, ಕ್ಯೂಬಾದ ಹೋರಾಟಗಾರರಲ್ಲಿ ಮೊದಲಿಗರಾಗಿ ಚರಿತ್ರೆಗೆ ಸೇರಿಹೋದರು. ಕ್ಯೂಬಾದ ಕ್ರಾಂತಿಯನ್ನು ಜಗತ್ತಿಗೆ ಕೊಂಡೊಯ್ದ ವ್ಯಕ್ತಿ ನನ್ನ ತಂದೆ.

'ನನ್ನ ತಂದೆಯ ಒಂದಂಶ ಬಹಳ ಸುಂದರವಾಗಿತ್ತು. ಆತ ಪ್ರೀತಿಸುವ ಅಖಂಡಶಕ್ತಿಯ ವ್ಯಕ್ತಿ. ಗೆಳೆಯರೊಡನೆ ಹಾಸ್ಯ ಮಾಡಬಲ್ಲ ಸ್ನೇಹಿತ. ಸಣ್ಣ ಮಕ್ಕಳತ್ತ ಎಲ್ಲಿಲ್ಲದ ಮೃದು ಪ್ರೀತಿ. ಬದುಕನ್ನು ಅತ್ಯಂತ ಉತ್ಕಟವಾಗಿ ಬದುಕಿದಾತ. ನನ್ನ ತಂದೆಯ ಬಗ್ಗೆ ನನಗೆ ನೆನಪಿರುವುದು ಇವೇ ಅಂಶಗಳು.

ಸದಾ ತಮ್ಮ ಕಾಮ್ರೇಡ್‌ಗಳೊಡನೆ, ತಮ್ಮ ಕುಟುಂಬದೊಡನೆ ತಮ್ಮ ಪ್ರತಿದಿನದ ವಿಷಯಗಳನ್ನು, ಚಿಂತನೆಗಳನ್ನು ಹಂಚಿಕೊಳ್ಳ ಬಯಸಿದ ವ್ಯಕ್ತಿ. ಜಗತ್ತಿನ ಯಾವುದೋ ಮೂಲೆಯಿಂದ ನನ್ನ ತಂದೆ ಕಳುಹಿಸಿದ ಪೋಸ್ಟ್ ಕಾರ್ಡ್ ನೋಡಿದಾಗ, ಆತನ ಮಮತೆಯ ಆ ಕೋಮಲತೆಯ ಅನುಭವ ನನಗಾಗಿತ್ತು. ಒಮ್ಮೆ ಆತ ನನಗೆ ಬರೆದ ಪತ್ರದಲ್ಲಿ ಕ್ಯೂಬಾದ ರಕ್ಷಣೆಯ ಬಗ್ಗೆ ಬರೆದಂತೆಯೇ, ಪ್ರಾಣಿ, ಪಕ್ಷಿಗಳ ರಕ್ಷಣೆಯ ಬಗ್ಗೆಯೂ ಬರೆದಿದ್ದರು. ನಾವು ಮಕ್ಕಳು. ದೇಶದ ಬಗ್ಗೆ ಏನೆಲ್ಲ ತಿಳಿಯಬೇಕೋ ಅದೆಲ್ಲವನ್ನು ಬರೆಯುತ್ತಿದ್ದರು. ನಮ್ಮೆಲ್ಲರಿಗೆ ಶಿಕ್ಷಣ ನೀಡುವತ್ತ ಅವರ ಒಂದಿಷ್ಟು ಯತ್ನವಿತ್ತು. ಆದರೆ ಅವರ ಬಳಿ ಇದ್ದ ಸಮಯ ಅಲ್ಪವೆಂದು ಅವರಿಗೆ ತಿಳಿದಿತ್ತು.

'ನನ್ನ ಸೋದರನಿಗೊಂದು ಕೆಟ್ಟ ಅಭ್ಯಾಸವಿತ್ತು. ಶಾಲೆಯಲ್ಲಿ ಆತ ಕೆಟ್ಟ ಪದಗಳನ್ನು ಬಳಸುತ್ತಿದ್ದ. ಇದನ್ನು ತಿಳಿದ ತಂದೆ ಆತನಿಗೊಂದು ಪತ್ರ ಬರೆದರು. 'ನನ್ನ ಬಳಿ ಒಂದು ಮೊಸಳೆ ಇದೆ. ನೀ ಶಾಲೆಯಲ್ಲಿ ಕೆಟ್ಟ ಮಾತು ಆಡಿದಾಗೆಲ್ಲ ಅದು ನನ್ನನ್ನು ಕಚ್ಚಿ ಬಿಡುತ್ತದೆ'. ಆತ ಅಷ್ಟು ಸರಳ ವ್ಯಕ್ತಿಯಾಗಿದ್ದರು. ನಮ್ಮಲ್ಲಿ ಯಾರೊಬ್ಬರೂ ಆತನಾಗಬಲ್ಲಷ್ಟು ಸರಳ ವ್ಯಕ್ತಿ. ಚೆ ಅವರ ವೈಶಿಷ್ಟ್ಯವಿದ್ದದ್ದೇ ಇಲ್ಲಿ. ಒಬ್ಬ ಮನುಷ್ಯ, ನಮ್ಮಂಥಹ ಯಾರೊಬ್ಬನೇ ವ್ಯಕ್ತಿ, ಆತ ಬಯಸಿದರೆ, ಆತನಲ್ಲಿ ಆತ್ಮಸ್ಥೈರ್ಯವಿದ್ದರೆ, ಆತ ಜನರನ್ನು ಪ್ರೀತಿಸಬಲ್ಲವನಾದರೆ, ಆತ ಜನತೆಗಾಗಿ ತನ್ನ ಪ್ರಾಣವನ್ನು ಬಲಿದಾನ ಕೊಡಬಲ್ಲ ಎಂದು ಚೆ ನಂಬಿದ್ದರು. ನಮ್ಮಲ್ಲಿ ಯಾರೊಬ್ಬರೂ ಚೆ ಆಗಬಲ್ಲೆವು, ನಾವು ಬಯಸಬೇಕಷ್ಟೆ, ನಾವು ಪ್ರಯತ್ನಿಸಬೇಕಷ್ಟೆ. ನನ್ನ ತಂದೆ ಉತ್ಕಟವಾಗಿ ಪ್ರೀತಿಸಬಲ್ಲ ಪರಿಪೂರ್ಣ ವ್ಯಕ್ತಿಯಾಗಿದ್ದರು. ಇದೇ ಆತನ ಅತ್ಯಂತ ಪ್ರಮುಖ ಗುಣವಾಗಿತ್ತು. ಸಾಮ್ರಾಜ್ಯಶಾಹಿಯ ಅತ್ಯಂತ ಕ್ರೌರ್ಯದಿಂದ, ಹೇಡಿತನದಿಂದ ಕೊಲ್ಲಲ್ಪಟ್ಟ ಈ ಮನುಷ್ಯ, ಸತ್ತು ಮೂವತ್ತು ವರ್ಷಗಳಾದರೂ ಕ್ಯೂಬಾದಿಂದ ಇಷ್ಟು ದೂರದ ಈ ದೇಶದಲ್ಲಿನ್ನೂ ಜೀವಂತವಿದ್ದಾನೆ. ಆತನನ್ನು ಕೊಂದ ಜನ, ಆತನ ನೆನಪನ್ನು, ಆತನಿತ್ತ ಸ್ಫೂರ್ತಿಯನ್ನು, ಕ್ರಾಂತಿಯ ಕಿಡಿಯನ್ನು ಕೊಲ್ಲದಾದರು.'

ಚೆ ಗೆವಾರ ಅವರ ಕ್ರಾಂತಿಯ ಮುಖವನ್ನಷ್ಟೇ ತಿಳಿದ ನಮ್ಮೆದುರು, ಅಲಿಡಾ, ತಮ್ಮ ತಂದೆಯ ಅತ್ಯಂತ ವೈಯುಕ್ತಿಕವಾದ ನೆನಪುಗಳನ್ನು, ಮಮತೆಯ ಮುಖಗಳನ್ನು ತೆರೆದಿಟ್ಟರು.

ಮಹಿಳೆಯರ ಮೇಲೆ ದಾಳಿ ವಿರೋಧಿಸಲು

# ಮಹಿಳಾ ಆರೋಗ್ಯ ರಕ್ಷಣಾ ಸಮಿತಿ ಉದ್ಘಾಟನೆ




ಅಚಲ ಸಂಪಾದಕ ಬಳಗವು ಹೊರತಂದ 'ಕ್ವಿನಕ್ರೀನ್ ಭಯಾನಕ ಗರ್ಭನಿರೋಧಕ ' ಹೊತ್ತಿಗೆಯನ್ನು ಡಾ|| ಎಚ್. ಗಿರಿಜಮ್ಮ ಬಿಡುಗಡೆ ಮಾಡುತ್ತಿರುವುದು.

1991ರಿಂದ ಈಚಿನ ದಿನಗಳಲ್ಲಿ ಭಾರತ ಸರ್ಕಾರ ವಿಶ್ವಬ್ಯಾಂಕ್, ಐ.ಎಂ.ಎಫ್ ಇತ್ಯಾದಿಗಳ ಒತ್ತಾಯಕ್ಕೆ ಮಣಿದು, ಖಾಸಗೀಕರಣ ಉದಾರೀಕರಣ ಜಾಗತೀಕರಣ ಇತ್ಯಾದಿ ಮಂತ್ರಗಳನ್ನು ಪಠಿಸುತ್ತಾ, ದೇಶದ ಮಾರುಕಟ್ಟೆಯನ್ನು ವಿದೇಶಿ ಉದ್ಯಮಗಳಿಗೆ ಮುಕ್ತವಾಗಿ ತೆರೆದಿರುವ ಸಂದರ್ಭವನ್ನು ದುರುಪಯೋಗ ಪಡಿಸಿಕೊಂಡು ಹಲವಾರು ವಿದೇಶಿ ಕಂಪೆನಿಗಳು ದೇಶದ ಹಲವಾರು ಸರ್ಕಾರೇತರ ಸಂಸ್ಥೆಗಳ ಸಹಕಾರದಿಂದ ದೇಶದ ಜನರ ಮೇಲೆ ಹಲವಾರು ಅಪಾಯಕಾರಿ ಔಷಧಗಳ ಪ್ರಯೋಗದಲ್ಲಿ ನಿರತರಾಗಿ, ಭಾರತೀಯ-ರನ್ನು ತಮ್ಮ ಪ್ರಯೋಗಗಳಿಗೆ ಬಲಿಪಶುಗಳನ್ನಾಗಿ ಮಾಡಿವೆ. ಈ ನಿಟ್ಟಿನಲ್ಲಿ ಬಳಕೆಗೆ ಬಂದಿರುವ 'ಕ್ವಿನಕ್ರೀನ್' ಎಂಬ ಒಂದು ಬಗೆಯ ಔಷಧವನ್ನು ಗರ್ಭನಿರೋಧಕ ಔಷಧವಾಗಿ ಪ್ರಯೋಗಿಸುವ ಒಂದು ಅಪಾಯಕಾರಿ ಚಟುವಟಿಕೆಯನ್ನು ಸಂಘಟಿತವಾಗಿ ವಿರೋಧಿಸಿ ತಡೆಯುವ ಸಲುವಾಗಿ, ಬೆಂಗಳೂರಿನಲ್ಲಿ ಕಾರ್ಯನಿರತವಾಗಿರುವ ಹಲವಾರು ಮಹಿಳಾ ಸಂಘಟನೆಗಳು ಒಟ್ಟುಗೂಡಿ 'ಮಹಿಳಾ ಆರೋಗ್ಯ ರಕ್ಷಣಾ ಸಮಿತಿ' ಎಂಬ ಸಂಘಟನೆಯನ್ನು ಸ್ಥಾಪಿಸಿ, ಮುಗ್ಧ ಜನರ ಮೇಲೆ ನಡೆಯುತ್ತಿರುವ ದಾಳಿಯನ್ನು ತಡೆಯಲು ಮುಂದಾಗಿವೆ.

ಈ ಉದ್ದೇಶದಿಂದ ಸಂಘಟಿತವಾಗಿರುವ ''ಮಹಿಳಾ ಆರೋಗ್ಯ ರಕ್ಷಣಾ ಸಮಿತಿ'' ಯನ್ನು ಸೆಪ್ಟೆಂಬರ್ 28ರಂದು ಸುಪರಸಿದ್ಧ ನ್ಯಾಯವಾದಿ ಶ್ರೀಮತಿ ಹೇಮಲತಾ ಮಹಿಷಿಯವರು ಸಂಪ್ರದಾಯ ಬದ್ಧವಾಗಿ ಉದ್ಘಾಟಿಸಿದರು. ಈ ವಿಧಿಬದ್ಧ ಉದ್ಘಾಟನೆಗೂ ಮೊದಲೇ 'ಸೆಪ್ಟೆಂಬರ್ 18 ರಂದು ಸಮಿತಿಯ ಕಾರ್ಯಕರ್ತರು ಈ ಅಪಾಯಕಾರಿ ಔಷಧಿಯನ್ನು ರಾಜಾರೋಷವಾಗಿ ಮಹಿಳೆಯರ ಮೇಲೆ ಪ್ರಯೋಗಿಸುತ್ತಿರುವ ಚಿಪ್‌ಟ್ರಸ್ಟ್ ಎಂಬ ಸಂಸ್ಥೆಯ ಎದುರು ಪ್ರತಿಭಟನಾ ಪ್ರದರ್ಶನ ನಡೆಸಿದ್ದರು. ತಾ. 28ರಂದು ಸಮಿತಿ ಒಂದು ವಿಚಾರ ಸಂಕಿರಣವನ್ನು ಸಹ ಏರ್ಪಡಿಸಿತ್ತು.

ಸಂಕಿರಣದಲ್ಲಿ ಮೊದಲು ಈ ಅಪಾಯಕಾರಿ ಔಷಧಿಯು ಎಷ್ಟು ವ್ಯಾಪಕವಾಗಿ ಬಳಕೆಯಾಗುತ್ತಿದೆ. ಅಪಾಯದ ಲಕ್ಷಣಗಳೇನು ಇತ್ಯಾದಿ ವಿವರಗಳನ್ನು ಔಷಧಿಕ್ರಿಯಾ ವೇದಿಕೆಯ ರಾಜ್ಯ ಕಾರ್ಯದರ್ಶಿಗಳಾದ ಡಾ|| ಪ್ರಕಾಶ್ ಸಿ. ರಾವ್, ದೀರ್ಘವಾಗಿ ವಿವರಿಸಿದರು.

ಈ ಅಪಾಯಕಾರಿ ಪ್ರಯೋಗಗಳು ಹಲವಾರು ತೃತೀಯ ರಾಷ್ಟ್ರಗಳ ಮುಗ್ಧ ಮಹಿಳೆಯರ ಮೇಲೆ ನಡೆಯುತ್ತಿದ್ದು, ಚಿಲಿ, ಬಂಗ್ಲಾದೇಶ್, ವಿಯೆತ್‌ನಾಮ್, ಮುಂತಾದ ರಾಷ್ಟ್ರಗಳಲ್ಲಿ ಈ ಪ್ರಯೋಗಗಳ ವಿರುದ್ಧ ಪ್ರಜಾ ಆಂದೋಳನ ನಡೆದು, ಚಿಲಿ, ವಿಯೆತ್‌ನಾಮ್‌ಗಳಲ್ಲಿ

ಪ್ರಯೋಗವನ್ನು ಅಧಿಕೃತವಾಗಿ ಬಹಿಷ್ಕರಿಸಲಾಗಿದೆ. ಪಾಕಿಸ್ತಾನ್, ಇರಾನ್‌ಗಳಲ್ಲೂ ಪ್ರಯೋಗ ನಡೆದಿದ್ದರೂ ಅಲ್ಲಿ ಇನ್ನೂ ಅದರ ಅಪಾಯ ಜನರ ಅರಿವಿಗೆ ಬಂದಂತಿಲ್ಲ.

ಭಾರತದಲ್ಲಿ ಪ್ರಧಾನವಾಗಿ ಇದರ ಉಪಯೋಗ ಬೆಂಗಳೂರು, ಕಲ್ಕತ್ತಾ, ದೆಹಲಿ ಮೊದಲಾದ ನಗರಗಳಲ್ಲಿ ವ್ಯಾಪಕವಾಗಿ ನಡೆದಿದೆ. ಅದರ ದುಷ್ಪರಿಣಾಮಗಳ ಬಗ್ಗೆ ಮಾಹಿತಿ ಇಲ್ಲದೆ ವೈದ್ಯರನ್ನೇ ನಂಬಿರುವ ಮುಗ್ಧ ಮಹಿಳೆಯರ ಮೇಲೆ ಪ್ರಯೋಗ ನಡೆಸಲಾಗಿದೆ. ಕ್ವಿನಕ್ರೀನನ್ನು ಗರ್ಭನಿರೋಧಕ ಔಷಧವಾಗಿ ಬಳಸಲು ವಿಶ್ವದ ಯಾವುದೇ ರಾಷ್ಟ್ರದ ಸರ್ಕಾರ ಅಧಿಕೃತ ಪರವಾನಗಿ ನೀಡಿಲ್ಲವೆಂಬ ಅಂಶವನ್ನು ಇಲ್ಲಿ ಗಮನಿಸಬೇಕಾಗಿದೆ.

ಬೆಂಗಳೂರಿನಲ್ಲಿ Contracyotive and Health Innovative Project (Chip Trust) ಎಂಬ ಒಂದು ಸಂಸ್ಥೆ ಈ ಔಷಧದ ಪ್ರಯೋಗ ನಡೆಸಿರುವ ಪ್ರಮುಖ ಸಂಸ್ಥೆಯಾಗಿದೆ. ಕಾನೂನು ಬಾಹಿರ ಚಿಪ್ ಟ್ರಸ್ಟ್‌ನ ವೈದ್ಯರಾದ ಡಾ। ಪ್ರವೀಣ ಕಿಣಿ ಈ ಔಷಧಿಯ ಉಪಯೋಗದ ಪ್ರಖರ ಪ್ರತಿಪಾದಕರಾಗಿದ್ದಾರೆ.

ದೆಹಲಿಯಲ್ಲಿ ಕ್ವಿನ್‌ಕ್ರೀನ್ ಮದ್ದಿನ ಪ್ರಸಾರಕ್ಕೆ ಉತ್ಸುಕರಾಗಿರುವವರಲ್ಲಿ ಪ್ರಮುಖರು ಭಾ.ಜ.ಪ.ದ ಲೋಕಸಭಾ ಸದಸ್ಯರಾಗಿರುವ ಡಾ. ಜೆ.ಕೆ. ಜೈನ್. ಜೈನ್ ಟಿ.ವಿ. ಒಡೆಯರೂ ಆಗಿರುವ ಈ ವೈದ್ಯರು ಅವರೇ ಹೇಳಿಕೊಳ್ಳುವಂತೆ ಅವರಿಗೆ ಈ ಔಷಧಿಯಲ್ಲಿ ''ವೈದ್ಯಕೀಯ ಹಾಗೂ ವಾಣಿಜ್ಯ ಆಸಕ್ತಿ''ಗಳಿವೆ.

ಅವರು ಅಂತರಾಷ್ಟ್ರೀಯ ಕುಟುಂಬ ಆರೋಗ್ಯ ಫೆಡರೇಷನ್ನಿನ (ಐ.ಎಫ್.ಎಫ್.ಎಚ್) ಅಧ್ಯಕ್ಷರೂ ಆಗಿದ್ದಾರೆ. ಅಮೇರಿಕಾ ಮೂಲದ ಈ ಸಂಘಟನೆ ಇಡೀ ವಿಶ್ವದಲ್ಲೇ ಈ ಮದ್ದಿನ ಪ್ರಸಾರಕ್ಕೆ ಪ್ರಮುಖ ಪ್ರತಿಪಾದಕ ಸಂಸ್ಥೆಯಾಗಿದೆ.

ದೆಹಲಿಯಲ್ಲಿ ಈ ಮದ್ದಿನ ವ್ಯಾಪಕ ಉಪಯೋಗ ಮಾಡುತ್ತಿರುವ ಲೇಡಿ ಹಾರ್ಡಿಂಜ್ ಮೆಡಿಕಲ್ ಕಾಲೇಜಿನ ವೈದ್ಯರುಗಳು ನಡೆಸಿರುವ ಪ್ರಯೋಗಗಳ ವಿವಿಧ ಹಂತಗಳನ್ನು ಗಮನಿಸಿದರೆ, ಇಲ್ಲಿ ನಿಗದಿತ ವೈಜ್ಞಾನಿಕ ವಿಧಾನಗಳ ವ್ಯಾಪಕ ಉಲ್ಲಂಘನೆಯಾಗಿರುವುದು ಕಂಡು ಬರುತ್ತದೆ ಎಂದು ಡಾ॥ ಪ್ರಕಾಶ್‌ರಾವ್ ಅಭಿಪ್ರಾಯಪಟ್ಟರು.

ಹತ್ತು ಸಾವಿರ ಮಹಿಳೆಯರು ಕ್ವಿನ್ ಕ್ರೀನ್ ಉಪಯೋಗದಿಂದ ಸಂತಾನಹರಣ ಚಿಕಿತ್ಸೆಗೆ ಒಳಗಾಗಿದ್ದಾರೆ ಎಂದು ಈ ಮಾರಕ ಔಷಧದ ಪ್ರತಿಪಾದಕರು ಬಹಳ ಹೆಮ್ಮೆಯಿಂದ ಘೋಷಿಸಿಕೊಳ್ಳುತ್ತಿದ್ದಾರೆ. ಆದರೆ ತನ್ಮೂಲಕ ತಾವು ಎಷ್ಟೊಂದು ಮಂದಿ ಮಹಿಳೆಯರನ್ನು ಎಂತಹ ಅನಿಷ್ಟ ಕೂಪಕ್ಕೆ ತಳ್ಳಿರುವೆವೆಂಬ ಅರಿವು ಅವರಿಗೆ ಉಂಟಾಗಿಲ್ಲ.

ಕ್ವಿನಿಕ್ರೀನ್ ಬಳಕೆಯನ್ನು ''ಕಡಿಮೆ ಅಪಾಯದ ಪರ್ಯಾಯ ವಿಧಾನ''ವೆಂದು ಪ್ರಚಾರಿಸುತ್ತಿದ್ದಾರೆ. ''ಜನಸಂಖ್ಯಾ ಸ್ಫೋಟವನ್ನು ತಡೆಗಟ್ಟಲು ಇದೊಂದು ಸಮರ್ಥ ಸಾಧನ'' ಎಂದು ಅದರ ಗುಣಗಾನ ಮಾಡಲಾಗುತ್ತಿದೆ. ಅಂದರೆ ''ಜನಸಂಖ್ಯಾ ಸ್ಫೋಟವನ್ನು ಹೇಗಾದರೂ ತಡೆಗಟ್ಟಿದರೆ ಸಾಕು. ಅದರ ಉಪಯೋಗದಿಂದ ಮಹಿಳೆಯರ ಮೇಲೆ ಎಂತಹ ಪರಿಣಾಮವಾದರೂ ಚಿಂತೆ ಇಲ್ಲ'' ಎಂಬ ಧೋರಣೆ ಈ ಔಷಧದ ಪ್ರತಿಪಾದಕರಲ್ಲಿ ಕಂಡು ಬರುತ್ತಿದೆ.

1920ರಲ್ಲಿ ಮಲೇರಿಯಾದ ಚಿಕಿತ್ಸೆಗಾಗಿ ಕಂಡು ಹಿಡಿಯಲಾದ ಕ್ವಿನೈನ್ ಮೂಲದ ಈ ಔಷಧಿಯನ್ನು 1960ರ ವೇಳೆಗೆ ಗರ್ಭ ನಿರೋಧಕವಾಗಿ ಉಪಯೋಗಿಸಬಹುದೆಂದು ಕಂಡು ಹಿಡಿಯಲಾಯಿತು. ಆದರೆ ಈ ಉಪಾಯದಿಂದ ಮಹಿಳೆಯರು ಹಲವಾರು ಇತರೆ ರೋಗಗಳಿಗೆ ತುತ್ತಾಗುವರೆಂಬ ಅಂಶ ತಿಳಿದು ಬಂದುದರಿಂದ ಜಗತ್ತಿನ ಯಾವುದೇ ದೇಶ ಇದನ್ನು ಅಧಿಕೃತವಾಗಿ ಮನ್ನಿಸಿಲ್ಲ. ಇದನ್ನು ಉಪಯೋಗಿಸಿದ ಮಹಿಳೆಯರಿಗೆ ಗರ್ಭಕೋಶದ ಹೊರಗೆ ಗರ್ಭ ಬೆಳೆಯುವ ಸಂಭವವಿರುವುದರಿಂದ ಇದು ಮಾರಕವಾಗಲೂ ಬಹುದಾಗಿದೆ ಎಂದು ಪ್ರಕಾಶರಾವ್ ವಿವರಿಸಿದರು.

ಫ್ರಂಟ್‌ಲೈನ್ ವಾರಪತ್ರಿಕೆಯ ಶ್ರೀಮತಿ ಪಾರ್ವತಿ ಕಿಣಿ, ಬೆಂಗಳೂರು ಗೌಸಿಯಾ ಆಸ್ಪತ್ರೆಯ ವೈದ್ಯರಾದ ಡಾ॥ ಗಿರಿಜಮ್ಮ, ಅವರು ಸಹ ಕ್ವಿನಕ್ರೀನ್ ನ ಅಪಾಯವನ್ನು ಸಂಕ್ಷಿಪ್ತವಾಗಿ ವಿವರಿಸಿ, ತಮ್ಮ ಆರೋಗ್ಯ ರಕ್ಷಣೆಯ ವಿಷಯದಲ್ಲಿ ಮಹಿಳೆಯರನ್ನು ಜಾಗೃತಗೊಳಿಸಬೇಕೆಂದರು. ಡಾ॥ ಶಮಾ, ಶ್ರೀಮತಿ ಹರಿಣಿಕಕ್ಕೇರಿ, ಶ್ರೀಮತಿ ಅನ್ನಪೂರ್ಣಮ್ಮ, ಇವರುಗಳು ಸಂಕಿರಣದಲ್ಲಿ ಭಾಗವಹಿಸಿ, ಮಾತನಾಡಿ, ಮಹಿಳೆಯರ ಆರೋಗ್ಯದ ಬಗ್ಗೆ ಸಮಾಜದ ಬೇಜವಾಬ್ದಾರಿ ನಿಲುವನ್ನು ಖಂಡಿಸಿ ಮಹಿಳೆಯರು ಸಹ ತಮ್ಮ ಸ್ವಂತ ಆರೋಗ್ಯದ ಕಡೆಗೆ ಗಮನವಿತ್ತು, ತಮ್ಮ ಮೇಲೆ ನಡೆಯುವ ಇಂತಹ ಪ್ರಯೋಗಗಳನ್ನು ಸತ್ವಯುತವಾಗಿ ವಿರೋಧಿಸಬೇಕೆಂದರು.

ಕ್ವಿನ್‌ಕ್ರೀನ್‌ನ ಮೂಲ, ಅದರ ಬೆಳವಣಿಗೆ, ವ್ಯಾಪ್ತಿ, ದುಷ್ಪರಿಣಾಮಗಳು ಇತ್ಯಾದಿಗಳನ್ನು ವಿವರವಾಗಿ ವಿವರಿಸುವ, ಮಹಿಳಾ ಆರೋಗ್ಯ ರಕ್ಷಣಾ ಸಮಿತಿ ಪ್ರಕಟಿಸಿರುವ ''ಕ್ವಿನ್‌ಕ್ರೀನ್-ಭಯಾನಕ ಗರ್ಭನಿರೋಧಕ'' ಎಂಬ ಕೈ ಹೊತ್ತಿಗೆಯನ್ನು ಈ ಸಂದರ್ಭದಲ್ಲಿ ಡಾ॥ ಗಿರಿಜಮ್ಮನವರು ಬಿಡುಗಡೆ ಮಾಡಿದರು.

ಈ ಔಷಧಿಯ ಬಗ್ಗೆ ಜನರನ್ನು ಎಚ್ಚರಿಸಿ, ಅದರ ವಿರುದ್ಧ ಹೋರಾಡಬೇಕೆಂದು ಕರೆಕೊಟ್ಟು ಅದನ್ನು ಬಹಿಷ್ಕರಿಸಲು ಸರ್ಕಾರವನ್ನು ಒತ್ತಾಯಿಸುವ ನಿರ್ಣಯ ಒಂದನ್ನು ಸಭೆ ಅನುಮೋದಿಸಿತು.

ಶ್ರೀಮತಿ ಸುಮಿತ್ರಾ ಬಾಯಿಯವರು ಸಂಕಿರಣದ ಅಧ್ಯಕ್ಷತೆ ವಹಿಸಿದ್ದರು. ಶ್ರೀಮತಿ ಗಾಯತ್ರಿಯವರು ಸಾರ್ವಜನಿಕರನ್ನು ಸ್ವಾಗತಿಸಿದರು. ಶ್ರೀಮತಿ ವಿಮಲ ಅವರು ಪ್ರಸ್ತಾವಿಕ ಭಾಷಣ ಮಾಡಿದರು.

- ಆನಂದ

# ಮಹಿಳೆ ಮತ್ತು ಆರೋಗ್ಯ

ಡಾ॥ ಪ್ರಕಾಶ್ ಸಿ. ರಾವ್

ನಮ್ಮ ದೇಶದಲ್ಲಿ ಮಹಿಳೆಯರ ಆರೋಗ್ಯ ಪುರುಷರಿಗೆ ಹೋಲಿಸಿದಲ್ಲಿ ಹೆಚ್ಚು ಚಿಂತಾಜನಕವಾಗಿದೆಯೆಂದು ಹೇಳಬಹುದು. ಮಹಿಳೆಯ ಈ ಪರಿಸ್ಥಿತಿಗೆ ಮಹಿಳೆಯ ಸಾಮಾಜಿಕ ಸ್ಥಾನಮಾನಗಳೇ ಕಾರಣ. ನಮ್ಮಲ್ಲಿಯ ಅನೇಕ ಸಾಂಸ್ಕೃತಿಕ ಪದ್ಧತಿಗಳು ಮಹಿಳೆಗೆ ಪುರುಷನಿಗಿಂತ ಕೆಳಗಿನ ಸ್ಥಾನಮಾನವನ್ನು ಕಲ್ಪಿಸಿ, ಮಹಿಳೆಯನ್ನು ಈ ಪರಿಸ್ಥಿತಿಗೆ ಇಳಿಸಿವೆ. ನಮ್ಮ ಸಮಾಜದಲ್ಲಿ ಇಂದೂ ಕಂಡುಬರುವ ಹೆಣ್ಣು ಭ್ರೂಣ ಹತ್ಯೆ, ಮಹಿಳೆಯರಲ್ಲಿ ಕಂಡುಬರುವ ಹೆಚ್ಚಿನ ಸಾವಿನ ಪ್ರಮಾಣ ಈ ವಿಷಯವನ್ನು ಸಿದ್ಧ ಪಡಿಸುತ್ತವೆ. ಅಜ್ಞಾನ, ಬಡತನ ಹಾಗೂ ಅನಕ್ಷರತೆಯಿಂದ ಮಹಿಳೆ ತನ್ನ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳುವ ಸಾಧ್ಯತೆ ಇಲ್ಲವೆಂದು ತೋರುತ್ತಿದೆ. ಮಹಿಳೆಯೊಬ್ಬಳು ಆರೋಗ್ಯವಂತಳಾದರೆ ಕುಟುಂಬದ ಎಲ್ಲರೂ ಆರೋಗ್ಯವಂತರಾಗಲು ಸಾಧ್ಯತೆ ಇರುವಾಗ ಮಹಿಳೆಯ ಆರೋಗ್ಯ ಪರಿಸ್ಥಿತಿಯನ್ನು ಸುಧಾರಿಸುವುದು ಸಮಾಜದ ಕರ್ತವ್ಯವಾಗಿದೆ. ಮಹಿಳೆಯ ಆರೋಗ್ಯ, ಇಂದು ವೈದ್ಯರಿಗಿಂತ ಹೆಚ್ಚು ಸಮಾಜ ವಿಜ್ಞಾನಿಗಳನ್ನು ಬಾಧಿಸುತ್ತಿದೆ. ಸ್ವಾತಂತ್ರದ 50 ವರ್ಷಗಳ ನಂತರವೂ ನಮ್ಮಲ್ಲಿ ಇಂತಹ ಪರಿಸ್ಥಿತಿ ಇರುವುದು ಚಿಂತಾಜನಕ.

### ಅಂಕಿ ಸಂಖ್ಯೆಗಳಲ್ಲಿ

ಮಾತೃ ಮರಣ ಸಂಖ್ಯೆ ಮಹಿಳೆಯ ಆರೋಗ್ಯ ಸೂಚಿಸಲು ಒಂದು ಉಪಯುಕ್ತ ಮಾಪನ. ಭಾರತದಲ್ಲಿ ಇದರ ಪ್ರಮಾಣ ಲಕ್ಷ (100,000) ಸಜೀವ ಹೆರಿಗೆಗೆ 500 ಮಹಿಳೆಯರ ಮರಣ. ನಮ್ಮ ನೆರೆಹೊರೆಯ ರಾಷ್ಟ್ರವಾದ ಶ್ರೀಲಂಕಾದಲ್ಲಿ ಇದು ಕೇವಲ 60. ಮುಂದುವರೆದ ರಾಷ್ಟ್ರ ಅಮೇರಿಕಾದಲ್ಲಿ ಇದು ಕೇವಲ 5. ಭಾರತದಲ್ಲಿ ಒಂದು ವಾರದಲ್ಲಿ ಆಗುವಷ್ಟು ಹೆರಿಗೆಗೆ ಸಂಬಂಧಪಟ್ಟ ಮರಣಗಳು ಯೂರೋಪಿನಲ್ಲಿ ಒಂದು ವರ್ಷದಲ್ಲಿ ಆಗುತ್ತವೆ.

ಪ್ರತಿವರ್ಷ ಹೆರಿಗೆಗೆ ಸಂಬಂಧಪಟ್ಟ ತೊಂದರೆಗಳಿಂದ ಇಡೀ ಜಗತ್ತಿನಲ್ಲಿ ಐದು ಲಕ್ಷ ಮಹಿಳೆಯರು ಸಾವನ್ನಪ್ಪುತ್ತಿದ್ದಾರೆ. ಆದರೆ ಭಾರತದಲ್ಲಿ ಈ ಸಂಖ್ಯೆ ಒಂದು ಲಕ್ಷ ಇಪ್ಪತ್ತುಸಾವಿರ. ಇವುಗಳಲ್ಲಿ ಶೇಕಡಾ 98ರಷ್ಟನ್ನು ತಡೆಗಟ್ಟಬಹುದಾಗಿದೆ.

ರಕ್ತಹೀನತೆ ಭಾರತೀಯ ಮಹಿಳೆಯರನ್ನು ಕಾಡುತ್ತಿರುವ ಒಂದು ಮುಖ್ಯ ಅನಾರೋಗ್ಯ. ಈ ತೊಂದರೆ ಶೇಕಡಾ 50 ರಷ್ಟು ಗ್ರಾಮೀಣ ಮಹಿಳೆಯರಲ್ಲಿ ಕಂಡುಬರುತ್ತದೆ. ಈ ತೊಂದರೆಯನ್ನು ಸುಲಭವಾಗಿ ಗುಣಪಡಿಸಬಹುದಾಗಿದೆಯಲ್ಲದೆ, ಬರದಂತೆ ತಡೆಯಬಹುದಾಗಿದೆ.

ಈ ಶತಮಾನದ ಪ್ರಾರಂಭದಿಂದ ನಮ್ಮ ದೇಶದಲ್ಲಿ ಹೆಣ್ಣು ಮಕ್ಕಳ ಸಂಖ್ಯೆ ಕಡಿಮೆಯಾಗುತ್ತಿದೆ. ಮುಂದುವರೆದ ರಾಷ್ಟ್ರಗಳಲ್ಲಿ ಹಾಗೂ ನಮ್ಮ ದೇಶದ ಕೇರಳದಲ್ಲಿ ಇದು ತದ್ವಿರುದ್ಧವಾಗಿದೆ. ಇದು ಮಹಿಳೆಯರಲ್ಲಿ ಹೆಚ್ಚು ಮರಣಗಳಾಗುತ್ತಿರುವುದನ್ನು ಸೂಚಿಸುತ್ತದೆ.

ಮಹಿಳೆಯ ಆಯುರ್ಮಾನ ನಿರೀಕ್ಷೆ (Life Expectancy) ಪುರುಷರಿಗೆ ಹೋಲಿಸಿದಲ್ಲಿ ಕಡಿಮೆ. ಮಹಿಳೆ ಪುರುಷರಿಗೆ ಹೋಲಿಸಿದಲ್ಲಿ ಹೆಚ್ಚು ದೇಹದಾರ್ಢ್ಯತೆ ಉಳ್ಳವಳಾದರೂ ಸಾಮಾಜಿಕ ಹಾಗೂ ಅನಾರೋಗ್ಯದ ಕಾರಣಗಳಿಂದ ಮಹಿಳೆಯ ಆಯುರ್ಮಾನ ನಿರೀಕ್ಷೆ ಕಡಿಮೆಯಾಗಿದೆ.

ಭಾರತದಲ್ಲಿ ಹೆಣ್ಣು ಭ್ರೂಣಹತ್ಯೆ, ಹೆಣ್ಣು ಮಗುವಿನ ಹತ್ಯೆ ಇಂದೂ ಮುಂದುವರೆಯುತ್ತಿದೆ. 1982ರಲ್ಲಿ 78,000 ಭ್ರೂಣ ಹತ್ಯೆಯಾಗಿದೆಯೆಂದು ದಾಖಲೆಯಾಗಿದೆ.

### ಮಹಿಳೆಯರ ಅನಾರೋಗ್ಯ ಏಕೆ ?

ಬಡತನದ ಪರಿಣಾಮ ಮಹಿಳೆಯರ ಮೇಲೆ ಹೆಚ್ಚು ಎಂದು ತೋರುತ್ತದೆ. ಇದಲ್ಲದೇ ಅಜ್ಞಾನ, ಅನಕ್ಷರತೆ ಹಾಗೂ ಅನೇಕ ಸಾಂಸ್ಕೃತಿಕ ನಂಬಿಕೆಗಳು, ಮಹಿಳೆಯ ಆರೋಗ್ಯವನ್ನು ತೀರ ಕೆಳಮಟ್ಟಕ್ಕೆ ಇಳಿಸಿವೆ. ಇದರ ಪರಿಣಾಮ, ಅಪ್ರಾಪ್ತ ವಯಸ್ಸಿನಲ್ಲಿಯೇ ಮದುವೆ, ದೈಹಿಕ ಬೆಳವಣಿಗೆಯಾಗುವುದರೊಳಗೆಯೇ ಗರ್ಭಧಾರಣೆ ಇತ್ಯಾದಿ.

ಮಹಿಳೆ ಅಹಿತಕರ ವಾತಾವರಣದಲ್ಲಿ ಕೆಲಸ ಮಾಡುವ ದೈಹಿಕ ಹಾಗೂ ಮಾನಸಿಕ ಶ್ರಮದಿಂದ ಅನೇಕ ಅನಾರೋಗ್ಯಗಳಿಗೆ ತುತ್ತಾಗಿದ್ದಾಳೆ. ಮಹಿಳೆಗೆ ನೈರ್ಮಲ್ಯದ ಬಗ್ಗೆ ತಿಳುವಳಿಕೆ ಇಲ್ಲದಿರುವುದರಿಂದ, ಅನೇಕ ಸೋಂಕು ರೋಗಗಳಿಗೆ ತುತ್ತಾಗುತ್ತಿದ್ದಾಳೆ.

ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಮಹಿಳೆಯನ್ನು ಪರೀಕ್ಷಿಸಲು ಏಕಾಂತತೆ ಇಲ್ಲದಿರುವುದರಿಂದ ಹಾಗೂ ಮಹಿಳಾ ವೈದ್ಯ ಅಥವಾ ದಾದಿಯರು ಇಲ್ಲದ ಕಾರಣ ಸರಿಯಾದ ವೈದ್ಯಕೀಯ ಪರೀಕ್ಷೆಗೆ ತೊಂದರೆಯಾಗುತ್ತಿದೆ. ಔಷಧಿ ಅಭಾವದಿಂದ ಚಿಕಿತ್ಸೆಯೂ ಆಗುತ್ತಿಲ್ಲ. ಖಾಸಗೀ ಚಿಕಿತ್ಸೆ ದುಬಾರಿಯಾಗುವುದರಿಂದ, ಸರ್ಕಾರೀ ಚಿಕಿತ್ಸೆ ದೊರಕದೇ ಇರುವುದರಿಂದ, ಮಹಿಳೆಯು ರೋಗ ತೊಂದರೆಗಳನ್ನು ಸಹಿಸಿಕೊಂಡು ನರಳುವ ಪ್ರಸಂಗಗಳು ಅನೇಕ.

ಮಹಿಳೆಯು ಜೀವನದ ಅನೇಕ ಹಂತಗಳಲ್ಲಿ ಪುರುಷರಿಗಿಂತಲೂ ಹೆಚ್ಚು ಆತಂಕವನ್ನು ಅನುಭವಿಸುತ್ತಾಳೆ. ಮಹಿಳೆಯ ಜೀವನದಲ್ಲಿ ಒಂದು ಮುಖ್ಯ ಹಂತ ಗರ್ಭಧಾರಣೆ ಹಾಗೂ ಹೆರಿಗೆ.

ಈ ಸಮಯದಲ್ಲಿ ಆಹಾರ, ವಿಶ್ರಾಂತಿ, ವ್ಯಾಯಾಮ, ವೈದ್ಯಕೀಯ ಪರೀಕ್ಷೆ ದೊರಕದಿದ್ದುದರಿಂದ ಹಾಗೂ ಹೆರಿಗೆಗೆ ಸಂಬಂಧಿಸಿದ ಅನೇಕ ತೊಂದರೆಗಳಿಂದ ಮಹಿಳೆ ಸಾವು ನೋವನ್ನು ಅನುಭವಿಸುತ್ತಿದ್ದಾಳೆ.

ಇಂದು ಭಾರತದಲ್ಲಿ ಗರ್ಭಪಾತದ ಕಾನೂನು (MTP Act) ಜಾರಿಯಲ್ಲಿದೆ. ಗರ್ಭಪಾತವನ್ನು ವೈದ್ಯರಿಂದ ಮಾಡಿಸಿಕೊಳ್ಳಬಹುದಾಗಿದೆ. ಹಾಗೂ ಅದು ಕಾನೂನು ಬಾಹಿರವಲ್ಲ. ಆದರೂ ಇಂದು 4ರಿಂದ 6 ದಶಲಕ್ಷ ಮಹಿಳೆಯರು ಕಾನೂನು ಬಾಹಿರವಾಗಿ ಗರ್ಭಪಾತವನ್ನು ಮಾಡಿಸಿಕೊಳ್ಳುತ್ತಿದ್ದಾರೆ. ಅವರು ಸಾಮಾನ್ಯವಾಗಿ ಬಡಕುಟುಂಬದ ಮಹಿಳೆಯರು. ಈ ತರಹದ ಗರ್ಭಪಾತದಿಂದ ಮಹಿಳೆಯ ಆರೋಗ್ಯಕ್ಕೆ ತೊಂದರೆ ಉಂಟಾಗುತ್ತಿದೆ. ಆದರೆ ಅದು ಬೆಳಕಿಗೆ ಬರುತ್ತಿಲ್ಲ.

ಭಾರತದಲ್ಲಿ ಪ್ರಾಥಮಿಕ ಆರೋಗ್ಯ ವ್ಯವಸ್ಥೆ ಸಮಂಜಸವಾಗಿಲ್ಲ. ಮಹಿಳಾ ಆರೋಗ್ಯಕ್ಕೆ ಸಂಬಂಧಪಟ್ಟ ಕಾರ್ಯಕ್ರಮಗಳಲ್ಲಿ ಸಂತಾನ ತಡೆಗಟ್ಟುವ ಕಾರ್ಯಕ್ರಮಗಳಿಗೆ ಅಗ್ರಸ್ಥಾನವಿದೆ. ಮಹಿಳಾ ಆರೋಗ್ಯವೆಂದರೆ ಕೇವಲ ತಾಯ್ತನಕ್ಕೆ ಹೆಚ್ಚು ಗಮನ ಕೊಡಲಾಗಿದೆ. ಆಧುನಿಕ ವಿಜ್ಞಾನವನ್ನು ಜನಸಾಮಾನ್ಯರ ಏಳ್ಗೆಗೆ ಉಪಯೋಗಿಸದೇ, ಕೆಲವೇ ಜನರ ಹಿತಕ್ಕೆ ಉಪಯೋಗವಾಗುವ ಕಾರ್ಯಕ್ರಮಗಳಿಗೆ ಮೀಸಲಿಡಲಾಗಿದೆ. ಆಧುನಿಕ ಗರ್ಭ ನಿರೋಧಕ ವಿಧಾನಗಳನ್ನು ಸರಿಯಾದ ಆಧಾರವಿಲ್ಲದೇ ನಮ್ಮ ಜನರ ಮೇಲೆ ಪ್ರಯೋಗ ಮಾಡಲಾಗುತ್ತಿದೆ. ಅನುಪಯುಕ್ತ ಗರ್ಭನಿರೋಧದ ಬಳಕೆಯನ್ನು ಮಾಡಲಾಗುತ್ತಿದೆ. ಉದಾ: ಕ್ವಿನಕ್ರೆನ್, ನಮ್ಮ ದೇಶದಲ್ಲಿ ಸಾಂಪ್ರದಾಯಿಕ ಚಿಕಿತ್ಸಾ ಪದ್ಧತಿಗಳು ಇನ್ನೂ ಜೀವಂತವಾಗಿವೆ. ಆದರೂ ಅದರ ಉಪಯೋಗವಾಗುತ್ತಿಲ್ಲ. ಜನರಿಗೆ ಹತ್ತಿರವಾಗಿರುವ ಈ ಚಿಕಿತ್ಸೆಗಳು ಜನಾರೋಗ್ಯ ಸುಧಾರಿಸಲು ಅತ್ಯುತ್ತಮವಾಗಿದೆ. ಈ ಚಿಕಿತ್ಸಾ ಪದ್ಧತಿಗಳನ್ನು ಕಡೆಗಣಿಸಿ, ಆಧುನಿಕ ಪದ್ಧತಿಯನ್ನು ಮಾತ್ರ ಜನರ ಮೇಲೆ ಹೇರಲಾಗುತ್ತಿದೆ.

ಆಧುನಿಕತೆ ಹೆಚ್ಚಾದಂತೆಲ್ಲ ನಮ್ಮ ಮಹಿಳೆಯರು ಹೊಸ ಹೊಸ ಸವಾಲುಗಳನ್ನು ಎದುರಿಸಬೇಕಾಗಿದೆ. ಇಂದು ಮಹಿಳೆಯರು ವ್ಯವಸ್ಥಾಯ, ಪ್ಲಾಂಟೇಶನ್, ಗಣಿ, ರ್‍ಯಾಲಿ, ಕಟ್ಟಡ, ಪ್ರೊಸೆಸಿಂಗ್ ಹಾಗೂ ಪ್ಯಾಕೇಜಿಂಗ್ ಉದ್ಯಮಗಳಲ್ಲಿ ಕೆಲಸ ಮಾಡುವುದರಿಂದ ಉಂಟಾಗುತ್ತಿರುವ ಸಾಮಾಜಿಕ, ಕೌಟುಂಬಿಕ ಆರ್ಥಿಕ, ಔದ್ಯೋಗಿಕ, ವೈಯುಕ್ತಿಕ ಆತಂಕಗಳಿಂದ ಬಳಲುತ್ತಾ ಹಲವಾರು ಅನಾರೋಗ್ಯಗಳಿಗೆ ತುತ್ತಾಗಿದ್ದಾರೆ.

### ಪರಿಹಾರ

ಮಹಿಳಾ ಆರೋಗ್ಯವನ್ನು ಸುಧಾರಿಸಲು ವೈದ್ಯರು, ಆಸ್ಪತ್ರೆಗಳು ಹಾಗೂ ಔಷಧಿಗಳು ಮಾತ್ರ ಇದ್ದರೆ ಸಾಲದು. ಕೇವಲ ಸರಕಾರವನ್ನು ಅವಲಂಬಿಸಿ ಮಹಿಳಾ ಆರೋಗ್ಯ ಸುಧಾರಿಸುವ ಪ್ರಯತ್ನ ಫಲಕಾರಿಯಾಗಲಾರದು. ಮಹಿಳಾ ಆರೋಗ್ಯ ಸುಧಾರಿಸಲು ಮಹಿಳೆಯರು ಹಾಗೂ ಮಹಿಳಾ ಸಂಘಟನೆಗಳು ಪ್ರಯತ್ನ ಮಾಡಬೇಕಾಗಿದೆ.

1. ಮಹಿಳಾ ಸಾಕ್ಷರತೆಯನ್ನು ಹೆಚ್ಚಿಸಬೇಕು.
2. ಮಹಿಳೆಯರಿಗೆ, ಶಾಲಾ ಹಾಗೂ ಕಾಲೇಜು ವಿದ್ಯಾರ್ಥಿನಿಯರಿಗೆ ಆರೋಗ್ಯದ ಬಗ್ಗೆ ತಿಳುವಳಿಕೆ ಮೂಡಿಸಬೇಕು.
3. ಹೆಣ್ಣುಮಕ್ಕಳಿಗೆ ಹದಿನೆಂಟು ವಯಸ್ಸಿನ ನಂತರವೇ ವಿವಾಹ ಹಾಗೂ ಗರ್ಭದಾರಣೆಯನ್ನು ಪ್ರೋತ್ಸಾಹಿಸಬೇಕು.
4. ಮೂವತ್ತೈದು ವರ್ಷದ ನಂತರ ಗರ್ಭಧಾರಣೆ ಪ್ರೋತ್ಸಾಹಿಸಬಾರದು.
5. ಗರ್ಭವತಿಗೆ ಪ್ರಸವಪೂರ್ವ ವೈದ್ಯಕೀಯ ಪರೀಕ್ಷೆ ಮಾಡಿಸಬೇಕು. ಸರಿಯಾದ ಆಹಾರ ವಿಶ್ರಾಂತಿ ಹಾಗೂ ಇತರ ಆರೋಗ್ಯ ವಿಷಯಗಳ ಬಗ್ಗೆ ಮಾಹಿತಿ ಕೊಡಬೇಕು. ಕುಟುಂಬ ಯೋಜನೆ ಬಗ್ಗೆ ಅಗತ್ಯ ಮಾಹಿತಿ ಕೊಡಬೇಕು.
6. ಗರ್ಭವತಿಗೆ ಎರಡು ಬಾರಿ ಧನುರ್ವಾಯು ಚುಚ್ಚುಮದ್ದು ಕೊಡಿಸಬೇಕು.
7. ಮಹಿಳೆಗೆ ಗರ್ಭಾವಸ್ಥೆಯಲ್ಲಿ ಕಾಣಿಸಿಕೊಳ್ಳುವ ತೊಂದರೆ ಬಗ್ಗೆ ಎಚ್ಚರ ವಹಿಸಲು ವಿಶೇಷ ಮಾಹಿತಿ ಕೊಡಬೇಕು. ಹಾಗೂ ಗರ್ಭಧಾರಣೆ ಸಮಯದಲ್ಲಿ ಉಂಟಾಗಬಹುದಾದ ಗಂಡಾಂತರಗಳ ಬಗ್ಗೆ ಮಾಹಿತಿ ನೀಡಬೇಕು.
8. ತರಬೇತಿ ಹೊಂದಿದ ದಾದಿಯಿಂದಲೇ ಹೆರಿಗೆ ಮಾಡಿಸಲು ಪ್ರೋತ್ಸಾಹಿಸಬೇಕು.

ನಮ್ಮ ಮಹಿಳೆಯರಿಗೆ ಮಾನವೀಯತೆಯ ಪಟ್ಟಕಟ್ಟಬೇಕಾಗಿದೆ. ಮಹಿಳೆಯ ಅನಾರೋಗ್ಯ ಕೇವಲ ರೋಗಗಳಿಂದಲ್ಲ ಎಂಬ ಸತ್ಯವನ್ನು ತಿಳಿಯಬೇಕು. ಇಂದು ಸರಕಾರ ಜಾಗತೀಕರಣ, ಖಾಸಗೀಕರಣ ಹಾಗೂ ಉದಾರೀಕರಣ ನೀತಿಯನ್ನು ಅನುಸರಿಸುತ್ತಿದ್ದು, ಜನಪರ ಆರೋಗ್ಯ ಹಾಗೂ ಔಷಧ ನೀತಿಯನ್ನು ಕಡೆಗಣಿಸುತ್ತಿರುವುದರಿಂದ ಮಹಿಳೆಯ ಆರೋಗ್ಯಕ್ಕೆ ಅಪಾಯ ಉಂಟಾಗುವ ಸಂಭವವಿದೆ. ಇಂತಹ ಸಂದರ್ಭದಲ್ಲಿ ಮಹಿಳೆಯ ಆರೋಗ್ಯ ಸುಧಾರಿಸಲು ಮಹಿಳಾ ಸಂಘಟನೆಗಳ ಪಾತ್ರ ಇನ್ನೂ ಹೆಚ್ಚಾಗಬೇಕಾಗಿದೆ.

ಕ್ಲಿನಿಕ್ ಅಪರ್ಣ
ಮೊದಲನೇ ಮುಖ್ಯರಸ್ತೆ, ನಾಲ್ಕನೇ ಅಡ್ಡರಸ್ತೆ,
ಯಶವಂತಪುರ, ಬೆಂಗಳೂರು.

ಸ್ವತಂತ್ರ ಭಾರತ ಸುವರ್ಣೋತ್ಸವದ ಸವಿನೆನಪಿನ ಕಾಣಿಕೆ
ನವಕರ್ನಾಟಕ ಪ್ರಕಾಶನದ ಹೆಮ್ಮೆಯ ಕೊಡುಗೆ!

ನವಕರ್ನಾಟಕ

# ಜ್ಞಾನ-ವಿಜ್ಞಾನಕೋಶ




ಜ್ಞಾನ-ವಿಜ್ಞಾನ-ತಂತ್ರಜ್ಞಾನದ
ಸಚಿತ್ರ ಸರಳ ನಿರೂಪಣೆ

ಡೆಮ್ಮಿ 1/4, 680 ಪುಟಗಳು 4 ಸಂಪುಟಗಳ

ಬೆಲೆ : ರೂ. 1,800

ಪ್ರಧಾನ ಸಂಪಾದಕರು :
ಪ್ರೊ|| ಎಂ.ಎ. ಸೇತುರಾವ್
ಶ್ರೀ ಕೆ.ಎಲ್. ಗೋಪಾಲಕೃಷ್ಣರಾವ್

ಕನ್ನಡದಲ್ಲಿ ಪ್ರಥಮ ಪ್ರಯತ್ನ

ಸಲಹಾ ಮಂಡಳಿ : ಪ್ರೊ|| ಜಿ.ಆರ್. ಲಕ್ಷ್ಮಣರಾವ್, ಪ್ರೊ|| ಅಡ್ಯನಡ್ಕ ಕೃಷ್ಣಭಟ್, ಶ್ರೀ ಕೊಳ್ಳೆಗಾಲ ಶರ್ಮ, ಡಾ|| ಕೆ.ವಿ. ವೆಂಕಟರಾಮು, ಶ್ರೀ ಸಿ.ಆರ್. ಕೃಷ್ಣರಾವ್.

ಆಯಾ ಕ್ಷೇತ್ರಗಳಲ್ಲಿ ಪರಿಣತರಾದ 23 ಜನಪ್ರಿಯ ವಿಜ್ಞಾನ ಲೇಖಕರು ಬರೆದಿರುವ ಒಂದು ಸಾವಿರಕ್ಕೂ ಹೆಚ್ಚು ಕಿರುಲೇಖನಗಳು.
ಉಚಿತ ಮಾಹಿತಿ ಪತ್ರಕ್ಕಾಗಿ ಬರೆಯಿರಿ :

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ : 5159
ಬೆಂಗಳೂರು-560 001 ದೂರವಾಣಿ : 2203580 2203581

ಶಾಖೆಗಳು



| | | | |
|---|---|---|---|
| ಕೆಂಪೇಗೌಡ ವೃತ್ತ | ಕೆ.ಎಸ್. ರಾವ್ ರಸ್ತೆ | ರಾಮಸ್ವಾಮಿ ವೃತ್ತ | ಸ್ಟೇಷನ್ ರಸ್ತೆ |
| ಬೆಂಗಳೂರು-9 | ಮಂಗಳೂರು-1 | ಮೈಸೂರು-24 | ಗುಲ್ಬರ್ಗಾ-2 |
| 2872385 | 441016 | 24094 | 24302 |

ಪ್ರಕಟಣೆ : ಮಾರ್ಚ್ 1998
ಪ್ರಕಟನಾಪೂರ್ವ ರಿಯಾಯಿತಿ : **25%**
ರೂ. 100 ಪಾವತಿಸಿ ಇಂದೇ ಹೆಸರು ನೋಂದಾಯಿಸಿ

**ಬ್ಯಾಂಕ್‌ಗಳಿಂದ ಸಾಲಸೌಲಭ್ಯ**
ಕೆನರಾ ಬ್ಯಾಂಕ್ ಮತ್ತು ಸಿಂಡಿಕೇಟ್ ಬ್ಯಾಂಕ್
ಈ ಸಂಪುಟಗಳನ್ನು ಕೊಳ್ಳಲು ಸುಲಭ ಕಂತುಗಳ ಸಾಲ ನೀಡುತ್ತೇವೆ.
ನಿಮ್ಮ ಸಮೀಪದ ಬ್ಯಾಂಕ್ ಶಾಖೆಯಲ್ಲಿ ವಿಚಾರಿಸಿ.

**ವಿಶೇಷ ಆಕರ್ಷಣೆ**
ಪ್ರಕಟಣಾಪೂರ್ವ ರಿಯಾಯಿತಿಯ ನೋಂದಾಯಿತರಿಗೆ
ನವಕರ್ನಾಟಕದ ಇತರ ಎಲ್ಲ ಪ್ರಕಟಣೆಗಳ ಮೇಲೆ
ಶೇ. 20ರ ರಿಯಾಯಿತಿ

ವಿಷಯ ವೈವಿಧ್ಯ, ಮುದ್ರಣ ವಿನ್ಯಾಸ
ಈ ದೃಷ್ಟಿಯಿಂದ ಅಂತರರಾಷ್ಟ್ರೀಯ ಪ್ರಕಟಣೆಗಳ ಮಾನಕಕ್ಕೆ ಸಮನಾದುದು.
ಅಂದವಾದ ಬಹುವರ್ಣ ಮುದ್ರಣ, ಅಚ್ಚುಕಟ್ಟಾದ ಬೈಂಡಿಂಗ್ ಆಕರ್ಷಕ ರಟ್ಟು ಪೆಟ್ಟಿಗೆಯೊಳಗೆ ನಾಲ್ಕು ಸಂಪುಟಗಳು.

# ಪದ್ಮಾಂತರಂಗ - ಒಂದು ಪರಿಚಯ

**ಪದ್ಮಾಂತರಂಗ : (ಎಸ್.ಕೆ. ಪದ್ಮಾದೇವಿ ಅಮೃತೋತ್ಸವ ಅಭಿನಂದನಾಗ್ರಂಥ), ಸಂಪಾದಕಿ : ಡಾ|| ವಿಜಯಾ, ಎಸ್.ಕೆ. ಪದ್ಮಾದೇವಿ ಅಮೃತೋತ್ಸವ ಸಮಿತಿ ಪರವಾಗಿ, ಎಂಟರ್‌ಟೈನರ್ಸ್ ಇಂಡಿಯಾ, ಬೆಂಗಳೂರು. ಬೆಲೆ ರೂ. 120/-**

ಐದು ದಶಕಗಳಿಗೂ ಮೀರಿ ಬಾನುಲಿ, ರಂಗಭೂಮಿ, ಮತ್ತು ಚಲನ ಚಿತ್ರ ಕ್ಷೇತ್ರಗಳಲ್ಲಿ ವಿಶೇಷ ಪರಿಶ್ರಮದಿಂದ, ಪರಿಣತಿಯಿಂದ ದುಡಿದು ಎಲ್ಲ ಕ್ಷೇತ್ರಗಳಲ್ಲೂ ತಮ್ಮ ಪ್ರತಿಭೆಯನ್ನು ನಿಕಷಕ್ಕೆ ಒಡ್ಡಿ ಜಯಗಳಿಸಿದ್ದರೂ ಇಂದಿನ ಪ್ರಚಾರ ಯುಗದ ಬಿರುಗಾಳಿಯ ಹೊಡೆತದ ಕಾರಣದಿಂದ ಎಲೆ ಮರೆಯಾಗಿಯೇ ಉಳಿದ ಶ್ರೀಮತಿ ಎಸ್.ಕೆ. ಪದ್ಮಾದೇವಿಯವರಿಗೆ ಎಪ್ಪತ್ತೈದು ವರ್ಷಗಳು ತುಂಬಿದ ಸುಸಂದರ್ಭದಲ್ಲಿ ಅವರ ಸ್ನೇಹಿತರೂ, ಅಭಿಮಾನಿಗಳೂ ಪ್ರೀತಿಯಿಂದ ಸಮರ್ಪಿಸಿದ ಅಭಿನಂದನಾ ಗ್ರಂಥ 'ಪದ್ಮಾಂತರಂಗ'.

ಒಬ್ಬ ಅಭಿನೇತ್ರಿಯ ಜೀವಿತ ಕಾಲದಲ್ಲೇ ಆಕೆಯ ಸಮಸ್ತ ಯಶಸ್ಸಿನ ಬಗ್ಗೆ ಬರವಣಿಗೆಯಲ್ಲಿ ದಾಖಲಿಸುವುದು ನಿಜಕ್ಕೂ ಸ್ತುತ್ಯರ್ಹ ಕೆಲಸ. ರಂಗಭೂಮಿಯ ಇತಿಹಾಸ ಅಧ್ಯಯನ ಶೀಲರಿಗಂತೂ ಇಂಥ ದಾಖಲೆಗಳು ಸುವರ್ಣ ಪುಟಗಳಿದ್ದಂತೆ. ಅಂಥ ಅಭಿನಂದನೀಯ ಕೆಲಸವನ್ನು ಶ್ರೀಮತಿ ವಿಜಯಾ, ಎಚ್.ಎಸ್. ಪಾರ್ವತಿ, ಶ್ರೀನಂದಕಿಶೋರ್ ಮುಂತಾದವರು ಅತ್ಯಂತ ಶ್ರದ್ಧೆಯಿಂದ ಮಾಡಿದ್ದಾರೆ. ಅವರ ಪ್ರಯತ್ನ ಸಾರ್ಥಕವಾಗಿದೆ.

ಎಪ್ಪತ್ತೈದು ವರ್ಷ ತುಂಬಿ ಸಾರ್ಥಕ ಜೀವನ ನಡೆಸುತ್ತಿರುವ ಶ್ರೀಮತಿ ಎಸ್.ಕೆ. ಪದ್ಮಾದೇವಿಯವರು ಬಹುಮುಖ ಪ್ರತಿಭೆ ಯುಳ್ಳವರು. ಬಾಲ್ಯದ ಪರಿಸರವೇ ರಂಗಭೂಮಿಯ ನಂಟು ಹೊಂದಿತ್ತು. ತಂದೆಗೆ ರಂಗಭೂಮಿಯ ಸೆಳೆತ. ಎದುರು ಮನೆಯಲ್ಲಿದ್ದ ಶ್ರೇಷ್ಠನಟ ಎಂ.ವಿ. ರಾಜಮ್ಮನವರ ಸ್ನೇಹ, ಪದ್ಮಾದೇವಿಯವರಲ್ಲಿದ್ದ ಪ್ರತಿಭೆಗೆ, ಪರಿಸರವೂ ಹದವಾದ ತಂಪನ್ನೊದಗಿಸಿ ರಂಗಭೂಮಿಯಲ್ಲೊಂದು ಸುಂದರ ಪುಷ್ಪ ಅರಳುವಂತೆ ಮಾಡಿತು.

ಪದ್ಮಾದೇವಿಯವರ ಸಹ ಕಲಾವಿದರಾಗಿದ್ದ ಹಿರಿಯ ರಂಗಭೂಮಿ ಹಾಗೂ ಚಲನ ಚಿತ್ರದಲ್ಲಿ ಪ್ರಸಿದ್ಧಿ ಪಡೆದಿರುವ ಶ್ರೀ ಸೋರಟ್ ಅಶ್ವತ್ಥ್‌ರವರು ಬರೆಯುತ್ತಾರೆ "ಒಂದು ಸನ್ನಿವೇಶದಲ್ಲಿ ಮನಸ್ಸಿನ ಹೋರಾಟ, ಅನೇಕ ಸಂಘರ್ಷಗಳ ತುಮುಲ, ಇವನ್ನು ಕಣ್ಣುಗಳಲ್ಲಿ ಭಾವ ತುಂಬಿ ಗೀತೆಗಿತ್ತ ಶಾರೀರದ ಇಂಪಿನಿಂದ ಸೆಟ್ಟಿನಲ್ಲಿದ್ದವರೆಲ್ಲರ ಕಣ್ಣೀರು ಮಿಡಿಸಿದ ಮಹಾನ್ ಕಲಾವಿದೆ ಪದ್ಮಾದೇವಿ."

"ಪದ್ಮಾದೇವಿ ಹುಟ್ಟು ಕಲಾವಿದೆ ಎಂಬುದನ್ನು ಸುಮಾರು ಅರವತ್ತು ವರ್ಷಗಳಷ್ಟು ಹಿಂದೆಯೇ ಮನಗಂಡಿದ್ದೆ. 'ನಚಿಕೇತ' ನಾಟಕದಲ್ಲಿ ನಚಿಕೇತನ ಸೋದರಿಯಾಗಿ ಅವರು ಅಭಿನಯಿಸು ತ್ತಿದ್ದರು. ಆಕೆಯ ರಾಜಗಾಂಭೀರ್ಯ, ನಡೆ, ನುಡಿ, ಇವುಗಳಿಗೆ ಒಪ್ಪುವಂಥ ಪ್ರಸನ್ನ ಮುಖಮುದ್ರೆ, ಇವೆಲ್ಲಕ್ಕೂ ಮಿಗಿಲೆನಿಸುವ ಕರುಣೆಯೇ ಕಣ್ಣುಗಳಲ್ಲಿ ತುಂಬಿನಿಂತಿದೆಯೇನೋ ಎನ್ನು ವಂತಹ ತೇಜಸ್ವಿ ಕಣ್ಣುಗಳು. ನೋಡಿದಷ್ಟೂ ನೋಡುತ್ತಿರಬೇಕೆನಿಸುತ್ತಿತ್ತು" ಪದ್ಮಾದೇವಿಯ ರಂಗ ನಟನೆಯ ಬಗ್ಗೆ ಹಿರಿಯರಂಗ ಕಲಾವಿದ ಶ್ರೀ ಬಿ.ಎಸ್. ಚಿನ್ನಪ್ಪನವರ ಅಭಿಪ್ರಾಯವಿದು.

'ಪದ್ಮಾಂತರಂಗ'ದಲ್ಲಿ ರಂಗಭೂಮಿಯ ಹಿರಿಯರು ಹಾಗೂ ಚಲನಚಿತ್ರ ನಟ ನಟಿಯರೂ, ಪದ್ಮಾದೇವಿಯವರ ಆಕಾಶವಾಣಿಯ ಸಹೋದ್ಯೋಗಿಗಳೂ, ಅವರ ಪರಿಚಿತ ಲೇಖಿಕಿ, ಲೇಖಕರೂ, ಲೇಖನಗಳನ್ನು ಬರೆದಿದ್ದಾರೆ. ಪದ್ಮಾದೇವಿಯವರೇ ತಮ್ಮ ಪುಟ್ಟ ಆತ್ಮಚರಿತ್ರೆಯನ್ನು ನಲವತ್ತೆಂಟು ಪುಟಗಳಲ್ಲಿ ಪ್ರಸ್ತುತ ಪಡಿಸಿದ್ದಾರೆ. ಭಾಗ ಮೂರರಲ್ಲಿ ಅಧ್ಯಯನ ಶೀಲರಿಗೆ ಹಿತವಾಗು ವಂತಹ ಹಲವಾರು ಲೇಖನಗಳಿವೆ. ಪದ್ಮಾದೇವಿಯವರು ರಂಗಭೂಮಿ, ಚಲನಚಿತ್ರ, ಆಕಾಶವಾಣಿ ಮುಂತಾದ ಕ್ಷೇತ್ರಗಳಲ್ಲಿ ಸಾಕಷ್ಟು ಶ್ರಮಿಸಿದವರು. ಹಾಗಾಗಿ ಈ ಎಲ್ಲ ಕ್ಷೇತ್ರಗಳ ಬಗ್ಗೆ ಸಂಗ್ರಹ ಯೋಗ್ಯವಾದ ಪ್ರಬಂಧಗಳನ್ನು ಪರಿಣತರಿಂದ ಬರೆಸಿ ಮುದ್ರಿಸಿರುವುದು ಅಭಿನಂದನೀಯ.

ಇವೆಲ್ಲದರ ನಡುವೆಯೂ ಪದ್ಮಾಂತರಂಗ ಕೆಲವು ಪ್ರಶ್ನೆಗಳನ್ನು ಉಳಿಸಿ ಬಿಡುತ್ತದೆ. ಪದ್ಮಾದೇವಿಯವರು ರಂಗಭೂಮಿಯ ಹಿರಿಯ ನಟಿ, ಚಲನಚಿತ್ರ ನಟ ಎನ್ನುವುದು ನಿಜವಾದರೂ ಜನಪ್ರಿಯತೆ ಹಾಗೂ ಮುಖಪರಿಚಯದ ದೃಷ್ಟಿಯಿಂದ ಎಂ.ವಿ. ರಾಜಮ್ಮ ನವರಂತೆ, ಪಂಢರೀಬಾಯಿಯವರಂತೆ, ಜನಸಾಮಾನ್ಯರಿಗೆ ಇವರ ಹೆಸರು ಹೇಳಿದ ತಕ್ಷಣ ಒಳಗಣ್ಣಿ ಮುಂದೆ ಇವರ ಮುಖ ಮೂಡುವುದು ಸ್ವಲ್ಪ ಕಷ್ಟವೇ. ಇದಕ್ಕೆ ಕಾರಣ ಪದ್ಮಾದೇವಿಯವರು ಬೆಳ್ಳಿತೆರೆಯಲ್ಲಿ ರಾಜಮ್ಮ, ಪಂಢರೀಬಾಯಿಯವರಂತೆ ದೀರ್ಘಕಾಲ ಕಾಣಿಸಿ ಕೊಂಡಿಲ್ಲದ್ದರಿಂದ ಆಮಟ್ಟದ ಪರಿಚಯಾತ್ಮಕವಾದ ಜನಪ್ರಿಯತೆ ದಕ್ಕಿಲ್ಲದಿರಬಹುದು. ಇದು ಒಬ್ಬ ಅಭಿನೇತ್ರಿಯ ಪ್ರತಿಭೆಯನ್ನು ಪ್ರಶ್ನಿಸು ವಂಥದ್ದಲ್ಲ. ಪರಿಚಯ, ಜನಪ್ರಿಯತೆಗಳೇ ಪ್ರತಿಭೆಯ ಮಾನದಂಡಗಳೂ ಅಲ್ಲ. ಆದರೆ ಇಂಥ ಒಂದು ಅಭಿನಂದನಗ್ರಂಥ ಹೊರತರುವಾಗಲಾದರೂ ಈ ದಿಕ್ಕಿನಲ್ಲಿ ಯೋಚಿಸುವ ಅಗತ್ಯ ತೀರ ಇದೆ. ಸುಮಾರು 250 ಪುಟಗಳಿರುವ ಈ ಪುಸ್ತಕದಲ್ಲಿ, ಮುಖಪುಟದಲ್ಲಿ ಒಂದು ಚಿಕ್ಕ ಸ್ಟ್ಯಾಂಪ್ ಸೈಜ್‌ನಂಥ ಅವರ ಫೋಟೋ ಬಿಟ್ಟರೆ ಎಲ್ಲಿಯೂ ಅವರ ಫೋಟೋ ಇಲ್ಲದಿರುವುದು ಈ ಕೃತಿಯ ದೊಡ್ಡ ಕೊರತೆ. ಹಾಗೂ ಇದು ತುಂಬಲಾರದ ನಷ್ಟವೂ ಸಹ. ರಂಗಭೂಮಿ ಮತ್ತು ಚಲನಚಿತ್ರ ನಟ-ನಟಯರ ಯಶಸ್ಸಿನ ಜೀವಾಳವೇ ಅವರ ಭಾವ ಚಿತ್ರಗಳು. ಅದೇ ಈ ಪುಸ್ತಕದಲ್ಲಿ ಲುಪ್ತವಾಗಿ ಒಬ್ಬ ಸಾಹಿತಿಯ ಅಭಿನಂದನಾ ಗ್ರಂಥದಂತೆ ಕೇವಲ ಅಕ್ಷರಮಯವಾಗಿರುವುದು ಔಚಿತ್ಯಪೂರ್ಣ ವಾಗಿಲ್ಲ.

ತುಂಬ ಸರಳವಾಗಿ ವಿಷಯಗಳು ಅಲ್ಲಿಷ್ಟು ಇಲ್ಲಿಷ್ಟು ಹಂಚಿಹರಿದು ಹೋದಂತೆ ಇದ್ದರೂ ಪದ್ಮಾದೇವಿಯವರ ಆತ್ಮಕಥೆ ಆಪ್ತವೆನಿಸುತ್ತದೆ. ಎರಡೇ ಪುಟವಾದರೂ ನೆನಪಿನಲ್ಲಿ ಉಳಿಯು ವಂತಹ ಲೇಖನವೆಂದರೆ ಶ್ರೀ ಗಿರೀಶ್ ಕಾಸರವಳ್ಳಿಯವರು ಬರೆದಿರುವುದು. ಡಬ್ಬಿಂಗ್ ಕಲಾವಿದೆಯಾಗಿ ಇತ್ತೀಚೆಗೆ 'ಕ್ರೌರ್ಯ' ಚಿತ್ರಕ್ಕೆ ಕಂಠದಾನ ಮಾಡಿದ ಪದ್ಮಾದೇವಿಯವರ ಇಳಿ ವಯಸ್ಸಿನ ಕರ್ತೃತ್ವಶಕ್ತಿಯ ಬಗ್ಗೆ ತುಂಬ ಹೃದಯಸ್ಪರ್ಶಿಯಾಗಿ ಬರೆದಿದ್ದಾರೆ. ಚಿಕ್ಕದಾದರೂ ಅತ್ತೆಯಬಗ್ಗೆ ಸೊಸೆ ಬರೆದಿರುವ ಕವನ, ಸೊಸೆಯ ಹೃದಯವಂತಿಕೆಯನ್ನು ತೆರೆದಿಡುತ್ತದೆ.

"ತನ್ನದೆಲ್ಲವ ನನಗೆ / ಧಾರೆಯೆರೆದು ನನ್ನ / ಬದುಕಬೆಳಗಿಸಿದವಳು

ಅತ್ತೆಯಲ್ಲ, ಅಮ್ಮ/ನನ್ನ ಪದ್ಮಮ್ಮ"

ಎಂದು ಸೊಸೆಯ ಬಾಯಿಂದ ಹೇಳಿಸಿ ಕೊಳ್ಳುವ ಪುಣ್ಯ ಎಷ್ಟು ಅತ್ತೆಯರಿಗಿರುತ್ತದೆ. ಒಟ್ಟಿನಲ್ಲಿ ಅಭಿನಂದನೀಯ ಅಭಿನಂದನಾಗ್ರಂಥ 'ಪದ್ಮಾಂತರಂಗ'.

**- ಶಾಂತಾ ನಾಗರಾಜ್**

# ಸರ್ವರಿಗೂ ಕನ್ನಡ ರಾಜ್ಯೋತ್ಸವದ ಹಾರ್ದಿಕ ಶುಭಾಶಯಗಳು

### ಪ್ರತಿಯೊಬ್ಬರ ಹೃದಯದಲ್ಲಿ

### ನಿರಂತರ ನೆಮ್ಮದಿಯ ಜ್ಯೋತಿ ಬೆಳಗಲಿ

ನವೆಂಬರ್ 1, 1956. ಭಾರತ ಮಾತೆಯ ಕಣ್ಮಣಿ ಕರ್ನಾಟಕವು ಏಕೀಕೃತ ರಾಜ್ಯವಾಗಿ ಕಂಗೊಳಿಸಲಾರಂಭಿಸಿದ ದಿನ. ಪ್ರಾಣವನ್ನೇ ಪಣವಾಗಿಟ್ಟು ಕರ್ನಾಟಕವನ್ನು ರಕ್ಷಿಸಿ, ಕಟ್ಟಿ ಬೆಳೆಸಿದ ಇತಿಹಾಸ ಪ್ರಸಿದ್ಧ ರಾಜರಾಣಿಯರು ಹಾಗೂ ನಾಯಕರಿಗೆ ಕೃತಜ್ಞತೆಗಳನ್ನು ಸಲ್ಲಿಸಬೇಕಾದ ಪುಣ್ಯ ಜನತೆಯನ್ನು ವಿಶಾಲ ಕರ್ನಾಟಕವೆಂಬ ಸುಂದರ ಸಮುಚ್ಚಯದಲ್ಲಿ ಒಗ್ಗೂಡಿಸಿದ ಧೀಮಂತ ನಾಯಕರಾದ ಆಲೂರು ವೆಂಕಟರಾಯರು, ಮುದವೀಡು ಕೃಷ್ಣರಾವ್, ಜಸ್ಟೀಸ್ ಎಸ್.ಎಸ್.ಸೇಟ್ಲೂರ್ ಡೆಪ್ಯೂಟಿ ಚೆನ್ನಬಸಪ್ಪ, ತಮ್ಮಣ್ಣಪ್ಪ ಚಿಕ್ಕೋಡಿ, ಫ.ಗು.ಹಳಕಟ್ಟಿ, ಬೆನಗಲ್ ರಾಮರಾವ್, ಕೆ. ರಾಜಗೋಪಾಲ ಕೃಷ್ಣರಾವ್, ಎಚ್.ವಿ. ನಂಜುಂಡಯ್ಯ, ಜಿ.ಎಚ್. ಹೊನ್ನಾಪುರ ಮಠ್, ಡಾ|| ಎನ್.ಎಸ್. ಹರ್ಡಿಕರ್ ಮುಂತಾದವರಿಗೆ ನಮನಗಳನ್ನು ಸಲ್ಲಿಸಲು ಇದು ಸೂಕ್ತ ಸಮಯ ಕೆಲವು ವಿಜ್ಞಾನಿಗಳು ಹಾಗೂ ಬುದ್ಧಿಜೀವಿಗಳಿಗೆ ಜನ್ಮ ನೀಡಿದ ಈ ಪುಣ್ಯಭೂಮಿಯು ಇಂದು ವಿಜ್ಞಾನ ತಂತ್ರಜ್ಞಾನ ಹಾಗೂ ಕೈಗಾರಿಕೆಗಳಲ್ಲಿ ಗಮನಾರ್ಹ ಸಾಧನೆಗೈದಿದೆ. ಕರ್ನಾಟಕದ ರಾಜಧಾನಿ ಬೆಂಗಳೂರು ಭಾರತದ ಸಿಲಿಕಾನ್ ವ್ಯಾಲಿ ಎಂದೇ ಹೆಸರಾಗಿದೆ. ಬಹುರಾಷ್ಟ್ರೀಯ ಕಂಪನಿಗಳ ಆಗಮನವು ಬಂಡವಾಳ ಹೂಡಿಕೆಗೆ ಆಸಂಖ್ಯ ಅವಕಾಶಗಳನ್ನು ಒದಗಿಸಿರುವುದರಿಂದ ಕರ್ನಾಟಕವು ಆರ್ಥಿಕವಾಗಿ ನಾಗಾಲೋಟದಲ್ಲಿದೆ.

ನೀರಾವರಿ : ಬೃಹತ್ ಹಾಗೂ ಮಧ್ಯಮ ಯೋಜನೆಗಳ ಅಡಿಯಲ್ಲಿ 35,201 ಹೆಕ್ಟೇರ್ ಹೆಚ್ಚುವರಿ ಪ್ರದೇಶಗಳಿಗೆ ನೀರಾವರಿ. ಸಣ್ಣ ನೀರಾವರಿ ಅಡಿಯಲ್ಲಿ 5105 ಹೆಕ್ಟೇರ ಹೆಚ್ಚುವರಿ ಪ್ರದೇಶಕ್ಕೆ ನೀರಾವರಿ. 29,000 ಹೆ.ಗೆ ನೀರುಣಿಸಲಾಗಿದೆ. ಕೈಗಾರಿಕೆ : ರೂ.8180.25 ಕೋಟಿ ವೆಚ್ಚದ 160 ಘಟಕಗಳಿಗೆ ಅನುಮತಿ. ಟೆಲ್ಕೊ ಹಾಗೂ ವೋಲ್ವೊ ಎರಡು ವಾಹನ ಉತ್ಪಾದನಾ ಘಟಕಗಳಿಗೆ ಅನುಮತಿ. ಕಂಪ್ಯೂಟರ್ ಸಂಬಂಧಿಸಿದ ಉದ್ಯಮಗಳ ಅನುಕೂಲಕ್ಕಾಗಿ ರೂ. 1187 ಕೋಟಿ ವೆಚ್ಚದಲ್ಲಿ ಬೆಂಗಳೂರಿನಲ್ಲಿ ಇನ್‌ಫರ್‌ಮೇಷನ್ ಟೆಕ್ನಾಲಜಿ ಪಾರ್ಕ್, 1996-97ರ ಅವಧಿಯಲ್ಲಿ 13502 ಸಣ್ಣ ಕೈಗಾರಿಕೆಗಳ ಸ್ಥಾಪನೆ. ಸಮಾಜ ಕಲ್ಯಾಣ : ಪೌಷ್ಟಿಕ ಆಹಾರ ಕಾರ್ಯಕ್ರಮದಡಿಯಲ್ಲಿ 28,93,403 ಮಕ್ಕಳಿಗೆ ಪೌಷ್ಟಿಕ ಆಹಾರ ಪೂರೈಕೆ. 5.07 ಲಕ್ಷ ವೃದ್ಧರಿಗೆ ಪ್ರತಿ ತಿಂಗಳು ಆರ್ಥಿಕ ನೆರವು. ಗಂಗಾ ಕಲ್ಯಾಣ ಯೋಜನೆಯಡಿಯಲ್ಲಿ 20,000 ಎಕರೆಗಳ ಭೂಮಿಗೆ ನೀರಾವರಿ ವ್ಯವಸ್ಥೆ. ನವಚೇತನ ಯೋಜನೆಯಡಿಯಲ್ಲಿ 5,000 ವಿದ್ಯಾವಂತ ನಿರುದ್ಯೋಗಿಗಳಿಗೆ ತರಬೇತಿ. 35,000 ಫಲಾನುಭವಿಗಳ ನೆರವಿಗೆ ರೂ.94.07 ಕೋಟಿ ಬುಡಕಟ್ಟು ಉಪಯೋಜನೆ. ಶಿಕ್ಷಣ : 9,000ಕ್ಕೂ ಹೆಚ್ಚು ಶಾಲಾ ಕೊಠಡಿಗಳ ನಿರ್ಮಾಣ. ಅಕ್ಷರ ದೀಪ ಕಾರ್ಯಕ್ರಮದಡಿಯಲ್ಲಿ 1175 ಜನಶಿಕ್ಷಣ ನಿಲಯಗಳು ಹಾಗೂ 333 ಶಿಕ್ಷಣ ಕೇಂದ್ರಗಳ ಸ್ಥಾಪನೆ. ಪೂರ್ಣ ಸಾಕ್ಷರತಾ ಆಂದೋಲನದಡಿ 6.83 ಲಕ್ಷ ಜನರಿಗೆ ಶಿಕ್ಷಣ. 40 ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಸ್ಥಾಪನೆ. 21,150 ಅಧ್ಯಾಪಕರ ನೇಮಕಾತಿ. ಕೃಷಿ : ಸಣ್ಣ ಕೃಷಿಕರಿಗಾಗಿ ನಮ್ಮ ಮನೆ ನಮ್ಮ ತೋಟ ಯೋಜನೆ. ತಳ್ಳುವ ಗಾಡಿ ತರಕಾರಿ ಮಾರಾಟಗಾರರಿಗೆ ಜೀವನಮಾರ್ಗ ಯೋಜನೆ. 1996-97 ದಾಖಲೆ 91.70 ಲಕ್ಷ ಟನ್ ಧಾನ್ಯಗಳ ಉತ್ಪಾದನೆ. ಸಂಕಷ್ಟ ಪರಿಸ್ಥಿತಿಯಲ್ಲಿ ಕಡಿಮೆ ಬೆಲೆಗೆ ಉತ್ಪನ್ನಗಳ ಮಾರಾಟ ತಡೆಯಲು ಯೋಜನೆ. ಸಾರಿಗೆ ಹಾಗೂ ಸಂಪರ್ಕ : 110 ಕೋಟಿ ರೂ.ಗಳ ವೆಚ್ಚದಲ್ಲಿ ಬೆಂಗಳೂರಿಗೆ ವರ್ತುಲ ರಸ್ತೆ ವ್ಯವಸ್ಥೆ ಹಾಗೂ ರೂ.4,200 ಕೋಟಿ ವೆಚ್ಚದಲ್ಲಿ ಕ್ಷಿಪ್ರ ಸಾರಿಗೆ ವ್ಯವಸ್ಥೆ. ನೂತನ ಹೆದ್ದಾರಿಗಳ ನಿರ್ಮಾಣ. ಬೆಂಗಳೂರು-ಮೈಸೂರು ಮತ್ತು ಬೆಂಗಳೂರು-ಮಂಗಳೂರು ಎಕ್ಸ್‌ಪ್ರೆಸ್ ರಸ್ತೆ ನಿರ್ಮಾಣಕ್ಕೆ ಕ್ರಮ. ವಿದ್ಯುಚ್ಛಕ್ತಿ : ರಾಜ್ಯದ ಒಟ್ಟು ವಿದ್ಯುತ್ ಸ್ಥಾಪಿತ ಸಾಮರ್ಥ್ಯ ಕ್ರಿ.ಶ. 2,000 ವೇಳೆಗೆ 7,500 ಮೆ.ವಾ. ಹೆಚ್ಚಿಸಲು ಕ್ರಮ. 4 ಚಾರ್ಜ್‌ಮೌಟೆಂಡ್ ವಿದ್ಯುತ್ ಘಟಕಗಳ ಸ್ಥಾಪನೆಗೆ ಕ್ರಮ. ರಾಯಚೂರು ಥರ್ಮಲ್ ವಿದ್ಯುತ್ ಸ್ಥಾವರದ 5ನೇ ಮತ್ತು 6ನೇ ಘಟಕಗಳಿಗೆ ಕರ್ನಾಟಕ ವಿದ್ಯುತ್ ನಿಗಮವು ಹಣಕಾಸು ಸಂಸ್ಥೆ ಹಾಗೂ ಸಾರ್ವಜನಿಕ ಸಂಸ್ಥೆಗಳ ನೆರವಿನಿಂದ ರೂ. 1,545 ಕೋಟಿ ಸಂಗ್ರಹ. ಕೊಜೆಂಟ್ರಿಕ್ಸ್ ಹಾಗೂ ನಾಗಾರ್ಜುನ ಪವರ್ ಕಾರ್ಪೊರೇಶನ್ ಯೋಜನೆಗಳಿಗೆ ಅಂತಿಮ ರೂಪ. ಬಿಡದಿಯಲ್ಲಿ ಸಂಯುಕ್ತ ಸೈಕಲ್‌ವಿದ್ಯುತ್ ಸ್ಥಾವರ. ಆರೋಗ್ಯ : ವಿಶ್ವಬ್ಯಾಂಕ್ ನೆರವಿನ ರೂ. 548.50 ಕೋಟಿ ವೆಚ್ಚದ ಜಿಲ್ಲಾ ಹಾಗೂ ತಾಲ್ಲೂಕು ಆಸ್ಪತ್ರೆಗಳ ಸುಧಾರಣೆಗಾಗಿ ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಯೋಜನೆ-11ರ ಅನುಷ್ಠಾನ. ಬಡವರಿಗೆ ತಗಲುವ ಗಂಭೀರ ಕಾಯಿಲೆಗಳ ಚಿಕಿತ್ಸೆಗಾಗಿ ರೂ. 100 ಕೋಟಿ ಸ್ಥಾಯಿ ನಿಧಿ.

ತತ್ವನಿಷ್ಠ ಸರ್ಕಾರ :-ರಾಜ್ಯ ಸರ್ಕಾರದ ಮಟ್ಟಿಗೆ ಇದೊಂದು ಅವಿಸ್ಮರಣೀಯ ಮಟ್ಟ, ಕೃಷಿ ಹಾಗೂ ಕೈಗಾರಿಕೆಗಳಿಗೆ ವಿದ್ಯುಚ್ಛಕ್ತಿ ಪೂರೈಸಲು ಆದ್ಯತೆ ನೀಡಿದ್ದು 1995ರ ಅವಧಿಯಲ್ಲಿ ಜಿಲ್ಲಾ ಪಂಚಾಯತ್ ಹಾಗೂ ತಾಲ್ಲೂಕು ಪಂಚಾಯತ್‌ಗಳಿಗೆ ಚುನಾವಣೆಗಳನ್ನು ನಡೆಸಲಾಗಿದೆ. ಸ್ತ್ರೀಯರು ಹಾಗೂ ಹಿಂದುಳಿದ ವರ್ಗಗಳಿಗೆ ಉದ್ಯೋಗ, ಶಿಕ್ಷಣ ಸಂಸ್ಥೆ ಹಾಗೂ ಚುನಾಯಿತ ಸಂಸ್ಥೆಗಳಲ್ಲಿ ವಿಶೇಷ ಮೀಸಲಾತಿ ನೀಡಲಾಗಿದೆ. ನೀರಾವರಿ ಗೃಹನಿರ್ಮಾಣ ಹಾಗೂ ವಿದ್ಯಾಭ್ಯಾಸ ಕ್ಷೇತ್ರಗಳಿಗೆ ಹೆಚ್ಚಿನ ಒತ್ತು ನೀಡಲಾಗಿದೆ. ಮುಂದಿನ 2 ವರ್ಷಗಳಲ್ಲಿ ಶೇ. 25ರಿಂದ 40ರಷ್ಟು ನೀರಾವರಿ ಸೌಲಭ್ಯವನ್ನು ಹೆಚ್ಚಿಸಲು ಉದ್ದೇಶಿಸಲಾಗಿದೆ. ಮಹಾತ್ಮಗಾಂಧಿಯವರ ಕನಸು ನನಸಾಗಿಸುವ ಸರ್ವಾಂಗೀಣ ಗ್ರಾಮೀಣ ಜನತೆಯ ಅಭಿವೃದ್ಧಿಗಾಗಿ ಸ್ವಸ್ತಿ ಗ್ರಾಮಯೋಜನೆಯನ್ನು ಆಗಸ್ಟ 15, 1997ರಂದು ಅನುಷ್ಠಾನಕ್ಕೆ ತರಲಾಗಿದೆ. ತೀವ್ರ ಬರ ಪರಿಸ್ಥಿತಿಯಲ್ಲಿರುವ ರಾಜ್ಯದ 100 ತಾಲ್ಲೂಕುಗಳಲ್ಲಿ ಪರಿಹಾರಕ್ಕಾಗಿ ರೂ.32.46 ಕೋಟಿ ಬಿಡುಗಡೆ ಮಾಡಲಾಗಿದೆ. ಕರ್ನಾಟಕವನ್ನು ಒಂದು ಮಾದರಿ ರಾಜ್ಯವನ್ನಾಗಿಸುವ ಮಹತ್ಕಾರ್ಯದಲ್ಲಿ ನಾವೆಲ್ಲರೂ ಒಗ್ಗಟ್ಟಿನಿಂದ ಶ್ರಮಿಸೋಣ.

-ಕರ್ನಾಟಕ ವಾರ್ತೆ

**ಕರ್ನಾಟಕ-ಭವ್ಯ ಭವಿಷ್ಯದ ಹೊಸ್ತಿಲಲ್ಲಿ**

# ಚಿಂತನೆ

"ದೇಶದ ವಿಶಾಲ ಜೀವನದಲ್ಲಿ ಹೆಚ್ಚಿನ ಹೊಣೆಗಳನ್ನು ಹೊರಲು ಈಗ ಸಂಧಿಗಳು ದೊರೆತಿವೆಯೆಂದ ಮಾತ್ರಕ್ಕೆ ಸಾಲದು. ಅವನ್ನು ಸರಿಯಾಗಿ ನಿರ್ವಹಿಸುವ ಪಾತ್ರತೆಯನ್ನೂ ನಮ್ಮ ಭಗಿನಿಯರು ಸಂಪಾದಿಸಬೇಕು. ಮಿಶ್ರ ಸಮಿತಿಗಳಲ್ಲಿ, ವಿಧಿ ಮಂಡಲಗಳಲ್ಲಿ, ವಿಶ್ವವಿದ್ಯಾಲಯಗಳಲ್ಲಿ ಅಲಂಕಾರದ ಸ್ಥಾನಗಳನ್ನು ಪಡೆಯುವುದರಿಂದ ಕೆಲಸ ಮುಗಿಯಲಿಲ್ಲ. ಅಲ್ಲಿ ತಮ್ಮ ಅಸ್ತಿತ್ವದ ಅರಿವುಂಟಾಗುವಂತೆ ಮಾಡಿ, ತಮ್ಮ ಉದ್ದೇಶಗಳು ನೆರವೇರುವಂತೆ ನೋಡಿಕೊಳ್ಳಬೇಕು. ಇಂಥ ಸಭೆಗಳಲ್ಲಿ ಪುರುಷರ ಸಂಖ್ಯಾಧಿಕ್ಯವೊಂದು ದೊಡ್ಡ ಆತಂಕವಾಗಿರುವುದು. ಆದರೆ ಮದ್ರಾಸದ ಡಾ|| ಮುತ್ತು ಲಕ್ಷ್ಮಿರೆಡ್ಡಿಯವರು ಇಂತಹ ಪರಿಸ್ಥಿತಿಯಲ್ಲಿ ಅಸಾಮಾನ್ಯ ಧೈರ್ಯದಿಂದ ನಡೆದು, ಮಕ್ಕಳ ಮತ್ತು ಹೆಣ್ಮಕ್ಕಳ ಸ್ಥಿತಿಯನ್ನು ಸುಧಾರಿಸುವ ಕಾರ್ಯಕ್ರಮವನ್ನು ಯಶಸ್ವಿಯಾಗಿ ಪೂರ್ತಿಗೊಳಿಸಿದರು. ಇವರಂತೆಯೆ ಇನ್ನೂ ಹಲವರು ಇರುವರು. ಆದರೆ ಇವರ ಸಂಖ್ಯೆಯು ಹೆಚ್ಚುವುದು ಅಗತ್ಯವಿದೆ."

- ಸುಲ್ತಾನಾ ಮೀರ್ ಅಮಿರುದ್ದೀನ್.

Reg. No. MAG (5) PRC, DEGL 036/89/87
BOOK POST/Periodicals

To,
Sri / Smt.

*If Undelivered please return to :*
**Jagruthi Mahila Adhyayana Kendra**
401, Vijay Tower, 2nd Main, RPC Layout
Vijayanagar, II Stage, Bangalore-560 040.

**ACHALA** - Edited by N. Gayathri, Published by Dr. G. Ramakrishna on behalf of Jagruthi Mahila Adhyayana Kendra, 26, 1st Main Road, Vyalikaval, Bangalore-03. Typeset & Printing by **AKSHARA PRINTERS**, B'lore-4. Ph.: 624082